# ಮಾನಸಿ

ತಿಂಗಳ ಪತ್ರಿಕೆ ಮೇ ೧೯೮೭

ಬಂಡಾಯ ಸಂದರ್ಭ ಮತ್ತು
ಸ್ತ್ರೀ ಸಂವೇದನೆಗಳ ಜಾಗೃತಿ

ಮಹಿಳೆಯರ ದೃಷ್ಟಿಯಲ್ಲಿ
ಉದ್ಯೋಗಸ್ಥ ಮಹಿಳೆ

ದಿ ಡಾರ್ಕ್ ಹೋಲ್ಡ್ಸ್
ನೋ ಟೆರರ್ಸ್

ನನ್ನ ತಂಗಿ

ಮಾನಸ

ಸಂಪುಟ: ೫ ಸಂಚಿಕೆ: ೫

ಮೇ ೧೯೯೨



ವಿಳಾಸ "ಮಾನಸ ತಿಂಗಳ ಪತ್ರಿಕೆ"
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—560067

ಬಿಡಿಪ್ರತಿ: 2 ರೂ.
ಸೂಚನೆ: ವಾರ್ಷಿಕ ಚಂದಾ: 20ರೂ.
ಆಜೀವ ಚಂದಾ: 250ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.

## ಈ ಸಂಚಿಕೆಯಲ್ಲಿ..........



# ಸಂಪಾದಕೀಯ

ಹೆಗ್ಗಡ ದೇವನ ಕೋಟೆಯಲ್ಲಿ ಮಹಿಳೆಯೊಬ್ಬಳು ಕುಡಿಯಲು ನೀರಿಲ್ಲದೆ ಸತ್ತಿರುವ ಘಟನೆ ಈಗ ಜನರಿಂದ ಮರೆಯಾಗಿದೆ. ಈ ಘಟನೆ ಬೆಳಕಿಗೆ ಬಂದ ಒಂದೆರೆಡು ದಿನ ಬಿಸಿ ಬಿಸಿ ಚರ್ಚೆಯಾಗಿ, ಸರ್ಕಾರವೂ ಕಣ್ಣೊರೆಸುವ ಒಂದು ಸಮಜಾಯಿಷಿ ನೀಡಿ ಸುಮ್ಮನಾಗಿ ಬಿಡುತ್ತದೆ.

ಕುಡಿಯುವ ನೀರು ಸಿಗದೇ ಮಹಿಳೆಯೋರ್ವಳು ಸತ್ತಿರುವುದು ನಮ್ಮಲ್ಲಿರುವ ಮೂಲಭೂತವಾಗಿ ಜನರಿಗೆ ದೊರೆಯ ಬೇಕಾದ ನಾಗರೀಕ ಸೌಲಭ್ಯಗಳ ಕೊರತೆಯನ್ನು ತೋರಿಸುತ್ತದೆ. ಇದು ನಮ್ಮಲ್ಲಿ ಸತ್ತಿರುವ ಮಾನವೀಯ ಮೌಲ್ಯಗಳ ಪ್ರತೀಕವಾಗಿದೆ.

ಇದು ಒಂದು ಅತಿರೇಖದ ಘಟನೆಯಾಗಿದ್ದು ಹಳ್ಳಿ ನಾಡಿನ ಪರಿಸ್ಥಿತಿಯನ್ನು ಒಳಗಣ್ಣು ಬಿಟ್ಟು ನೋಡಿದರೆ ಇದೇನು ಅಸಹಜ ಘಟನೆಯಲ್ಲ. ಸಂಪ್ರದಾಯಿಕವಾಗಿ ಸ್ತ್ರೀಯರೇ ನೀರು ತರುವುದು, ಪಾತ್ರೆ ತೊಳೆಯುವುದು ಬಟ್ಟೆ ಒಗೆಯುವುದು, ಹಸು-ಎಮ್ಮೆಗಳಿಗೆ ನೀರು ಕುಡಿಸುವುದು, ಮೈ ತೊಳೆಯುವುದು ಮುಂತಾದುವುಗಳನ್ನು ಸ್ತ್ರೀಯರೇ ಮಾಡ ಬೇಕಾಗಿರುವುದರಿಂದ ಇಂತಹ ಸಮಸ್ಯೆಗಳು ಅವರ ಹೊರೆಯನ್ನು ದ್ವಿಗುಣಗೊಳಿಸುತ್ತವೆ. ಬೋರುಗಳು ಇದ್ದರೂ, ಕೆಟ್ಟು ಬಿದ್ದಿರುತ್ತವೆ. ಕರೆಂಟ್ ಸಮಸ್ಯೆಯಿಂದಾಗಿ ವಾರಗಟ್ಟಲೆ ಹಳ್ಳಿಗಳಲ್ಲಿ ನೀರು ಸರಬರಾಜು ಇರುವುದಿಲ್ಲ. ಅನಿವಾರ್ಯವಾಗಿ ಸ್ತ್ರೀಯರು ಕೆರೆ, ಕುಂಟೆ, ಮೈಲು ಮೈಲು ದೂರದಿಂದ ನೀರು ಹೊರುವುದು ದಿನ ನಿತ್ಯದ ದೃಶ್ಯವಾಗಿದೆ.

ಸ್ವತಂತ್ರ ಬಂದು ೪೫ ವರ್ಷಗಳಾಗಿದ್ದರೂ ರಾಜಧಾನಿಗೆ ಹತ್ತಿರವಿರುವ ಎಷ್ಟೊ ಹಳ್ಳಿಗಳಲ್ಲಿ ಬಸ್ಸುಗಳು ಹೋಗುವುದಿಲ್ಲ. ರಸ್ತೆ ಸರಿಯಿರುವುದಿಲ್ಲ, ೫ ೬ ಕಿ. ಲೊ. ಮಿ. ನಡೆದು, ಮಕ್ಕಳು, ಹೆಂಗಸರು, ವಯಸ್ಸಾದವರು ಬಸ್ಸುಗಳನ್ನು ಹಿಡಿಯ ಬೇಕಾಗುತ್ತದೆ. ಜನರಿಗೆ ಆಸ್ಪತ್ರೆಯ ಸೌಲಭ್ಯಗಳಿಲ್ಲ, ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಅನುಕೂಲವಿಲ್ಲ. ಸರ್ಕಾರ ಮೊದಲು ಕಣ್ಣು ತೆರೆಯ ಬೇಕಾದುದು, ಪ್ರತಿಯೊಂದು ಹಳ್ಳಿಯಲ್ಲೂ ಸರಿಯಾದ ರಸ್ತೆ, ಬಸ್ ಸೌಕರ್ಯ, ಕುಡಿಯುವ ನೀರು, ಆಸ್ಪತ್ರೆ, ಸ್ಕೂಲ್ ಮತ್ತು ವಿದ್ಯುಚ್ಛಕ್ತಿ ಇವುಗಳ ಕಡೆಗೆ, ಇವುಗಳನ್ನು ಮಾಡದ ಪಕ್ಷವನ್ನು ಆರಿಸಿ ಕಳಿಸುವ ನಾವು ನಾಗರೀಕರು ನಾಚಿಕೆ ಪಡಬೇಕಾದ ಸಂಗತಿಯೇ ಸರಿ.

# ಬಂಡಾಯ ಸಂದರ್ಭ ಮತ್ತು ಸ್ತ್ರೀ ಸಂವೇದನೆಗಳ ಜಾಗೃತಿ

ಭೂಮಿಯ ಮೇಲೆ ಮಾನವ ಜೀವಿಯ ಪಾದಾರ್ಪಣದ ಅಂದಿನ ಯುಗಮಾನದಲ್ಲಿ, ತನ್ನ ವಂಶದ ಪಾಲನೆ-ಪೋಷಣೆಯ ಹೊಣೆ ಹೊತ್ತವಳು ಹೆಣ್ಣು. ಬನದ ಕರಡಿಯಾಗಿ ಬದುಕುತ್ತಿದ್ದವಳನ್ನು ಪುರುಷ ನಾಲ್ಕು ಗೋಡೆಗಳೊಳಗೆ ಕೂಡಿ ಹಾಕಿದ ವೈಚಿತ್ರ್ಯ ಬೆರಗುಗೊಳಿಸುವಂಥದ್ದು. ಯಾವಾಗ ಮಾನವ ಗುಂಪುಗಳು ನಿರ್ದಿಷ್ಟ ಪ್ರದೇಶಗಳಲ್ಲಿ ನೆಲೆಯೂರಿ, ವ್ಯವಸಾಯದಂಥ ಉತ್ಪಾದಕ ವಿಧಾನಗಳನ್ನು ಕಂಡುಕೊಂಡವೋ, ಆಗ ಪುರುಷ ಸ್ತ್ರೀ ಸಹಜವಾದ ದೈಹಿಕ ದೌರ್ಬಲ್ಯದ ನೆವದಲ್ಲಿ ತಾನು ಉತ್ಪಾದಕ ಶ್ರಮದಲ್ಲಿ ತೊಡಗಿದ. ಮಕ್ಕಳು ಸಮೂಹದ ಆಸ್ತಿಯಾಗದೇ ಕುಟುಂಬದ ಆಸ್ತಿ ಎಂಬ 'ಕುಟುಂಬ' ಪರಿಕಲ್ಪನೆ ರೂಢಿಗತವಾದಂತೆಲ್ಲ ಹೆಣ್ಣು ಪುರುಷನ ಖಾಸಗಿ ಆಸ್ತಿಯಾಗಿ ಪರಿಣಿತಳಾದಳು. ಪುರುಷ ಪ್ರಧಾನ ಸಮಾಜ ರೂಪುಗೊಳ್ಳತೊಡಗಿತು. ಮಹಿಳೆಯ ಬದುಕನ್ನು ನಿಗ್ರಹಿಸುವ ಕಟ್ಟುಕಟ್ಟಳೆಗಳೂ, ವಿಧಿ-ನಿಯಮಗಳೂ, ಧರ್ಮ-ಆದರ್ಶದ ಮೌಲ್ಯಗಳೂ ಹೇರಲ್ಪಟ್ಟವು. ಮುಂದ ಕಾಲದ ಪುಟಗಳಲ್ಲಿ ದಾಖಲಾದದ್ದು ಪುರುಷನ ದರ್ಪದ ಅಡಿಯಾಳತ್ವವನ್ನು ಅತ್ಯಂತ ಗೌರವಾದರಗಳಿಂದ ಒಪ್ಪಿ ತನಗೆ ತಾನೇ ಮೋಸಹೋದ ಮಹಿಳೆಯ ಬದುಕಿನ ವಿಪರ್ಯಾಸ. ಹೆಣ್ಣನ್ನು ಪ್ರಾಣಿಯಂತೆ ಕಂಡ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ "ಮಹಿಳೆಯ ಸಂವೇದನೆ" ಎಂಬ ಮಾತೇ ಅಪಹಾಸ್ಯದ್ದಾಗಿ ತೋರುವ ದುರಂತವಿದೆ.

ಜಗತ್ತಿನ ಮೂಲೆ ಮೂಲೆಗಳಲ್ಲಿ ಮಾನವ ಕಲ್ಯಾಣಾರ್ಥವಾಗಿ ಹುಟ್ಟಿದ ಧರ್ಮಗಳಲ್ಲಿ ಹೆಣ್ಣಿಗೆ ಬೆಲೆಯಿಲ್ಲ. ಇಂದಿಗೂ "ಮಾನವ" ಎಂಬ ಪದದಲ್ಲಿ "ಮಹಿಳೆ" ಎಂಬ ಅರ್ಥ ಸಲೀಸಾಗಿ ಒಳಗೊಂಡುವುದಿಲ್ಲ. "ಮನು ಧರ್ಮಶಾಸ್ತ್ರ" ದ ಮೂಲಕ ಹೆಣ್ಣಿನ ಬದುಕಿಗೆ ಸ್ಪಷ್ಟ ಕಟ್ಟಳೆಗಳನ್ನು ವಿಧಿಸಿದ ಹಿಂದೂ ಧರ್ಮದಲ್ಲಿ, ಹೆಣ್ಣು ಶೂದ್ರನಿಗಿಂತಲೂ ಹೆಚ್ಚಿನ ತುಚ್ಛೀಕರಣಕ್ಕೆ ಒಳಗಾದವಳು. ಜೈನಧರ್ಮ "ಹೆಣ್ಣು ಗಂಡಾಗಿ ಹುಟ್ಟಿ ಬಂದಾಗ ಮಾತ್ರ ಮುಕ್ತಿ ಸಾಧ್ಯ" ಎನ್ನುತ್ತದೆ. ಬುದ್ಧ ತನ್ನ ಸಂಘದಲ್ಲಿ ಮಹಿಳೆಗೆ ಪ್ರವೇಶ ನೀಡಿದನಾದರೂ, ಪ್ರಮುಖ ಧಾರ್ಮಿಕ ವಿಧಿಗಳಲ್ಲಿ ಪಾಲ್ಗೊಳ್ಳಗೊಡಲಿಲ್ಲ. "ಮಾತೃದೇವೋಭವ" ಎಂಬ ಭವ್ಯ ವಿಚಾರದ ಹಿನ್ನೆಲೆಯಲ್ಲಿ ಸೃಷ್ಟಿಗೊಂಡ ಋಗ್ವೇದ, ಶಾಕ್ತ ಧರ್ಮಶಾಸ್ತ್ರ ರಾಮಾಯಣ ಮಹಾಭಾರತ ಮಹಾಕಾವ್ಯಗಳು ಹೆಣ್ಣನ್ನು ಎಲ್ಲ ದುಃಖದ, ಎಲ್ಲ ಕೇಡುಕಿನ ಸಾಕಾರ ರೂಪವಾಗಿ ಕಂಡವು. ಮೈತ್ರೇಯ ಸಂಹಿತೆ-"ಒಳ್ಳೆಯ ಹೆಂಗಸು, ಕೆಟ್ಟ ಹೆಂಗಸಿಗಿಂತಲೂ ಕಡೆ" ಎಂದು ಸಾರಾಸಗಟಾಗಿ ಸಾರಿತು.

ಜಾಗತಿಕ ಮಟ್ಟದಲ್ಲಿಯೂ ಸ್ಥಾನ ಭಿನ್ನವಾಗಿರಲಿಲ್ಲ ಎನ್ನುವುದಕ್ಕೆ ಒಂದೆರೆಡು ಉದಾಹರಣೆಗಳನ್ನು ಗಮನಿಸಬಹುದು:—

೧) ಜ್ಞಾನವು ಪುರುಷನ ಗೌರವವನ್ನು ಹೆಚ್ಚಿಸಿದರೆ ಅಜ್ಞಾನ ಸ್ತ್ರೀಯರ ಸೌಂದರ್ಯವನ್ನು ಹೆಚ್ಚಿಸುವುದು. — ಚೀನಿಗಾದೆ.

೨) ಜಗತ್ತಿನಲ್ಲಿ ಪಾಪವನ್ನು ತಂದವಳೇ ಹೆಣ್ಣು.
— ಸೇಂಟ್‌ಪಾಲ್.

೩) ಸ್ತ್ರೀಯರು ತತ್ವಶಾಸ್ತ್ರವನ್ನು ಎಂದೂ ಅಭ್ಯಾಸಿಸಬಾರದು. ವೈವಾಹಿಕ ನಿಯಮಗಳನ್ನು ಪಾಲಿಸುವುದೇ ಅವರಿಗೆ ಹೆಚ್ಚಿನ ತತ್ವ — ಯುರೋಪಿನ ಧರ್ಮಬೋಧಕ

ಇಂಥ ಪರಿಸರದ ಕೂಸಾಗಿ ಮಹಿಳೆ ಪಡೆದುಕೊಂಡಿರುವ ಸಂವೇದನೆಗಳು ಎಂಥವಿರಬಹುದು? "ತಾನೂ ಒಬ್ಬ ವ್ಯಕ್ತಿ. ಈ ಬದುಕಿನ ರಾಜಕೀಯ ಸಾಮಾಜಿಕ ಸ್ಥಿತ್ಯಂತರಗಳಿಗೂ ತನಗೂ ಸಂಬಂಧ ಇದೆ" ಎಂದು

ವಿಚಾರ ಮಾಡಲೂ ಸಾಧ್ಯವಾಗದ; ಯಾಜಮಾನ್ಯ ಪರಂಪರೆಯ ಎಲ್ಲ ಹೇರಿಕೆಗಳಿಗೂ ಒಗ್ಗಿ ಹೋದ ಆಕೆಯ ಸಂವೇದನೆಗಳಿಗೊದಗಿದ ವಿಪತ್ತಿ; ಕೇವಲ ಮಹಿಳೆಯ ಬದುಕಿಗಲ್ಲ – ಮಾನವ ವಿಕಾಸ ತತ್ವಕ್ಕೇ ಆದ ಅನ್ಯಾಯವಾಗಿದೆ.

“ಭಾರತೀಯ ಸಂಸ್ಕೃತಿಯ ಪರಿಕಲ್ಪನೆಯಲ್ಲಿ ಸ್ತ್ರೀ ಎಂದರೆ ಸೂತ್ರಿ “ಸೋತೃ” ಎಂಬ ಧಾತುವಿನ ಅರ್ಥದಂತೆ ಹೆರುವ ಪ್ರಾಣಿ. ಗರ್ಭದ ಅಸ್ತಿತ್ವದಿಂದಲೇ ವ್ಯಕ್ತಿತ್ವವನ್ನು ಪಡೆದುಕೊಂಡವಳು.” ಹೀಗೆ ಒಂದೆಡೆ ಲೈಂಗಿಕ ಅಸ್ತಿತ್ವವನ್ನೂ, ಇನ್ನೊಂದೆಡೆ ಅದೇ ಲೈಂಗಿಕ ಅಸ್ಪೃಶ್ಯತೆಯನ್ನೂ ಕೊಟ್ಟು ಒಂದು ಬಗೆಯ “ಮಾನಸಿಕ ದೂರದಲ್ಲೇ ಇಡುತ್ತ ಬಂದರು. ಮನುವಿನಲ್ಲಿ “ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾ.” “ನ ಸ್ತ್ರೀ ಸ್ವಾತಂತ್ರ್ಯಮರ್ಹತಿ” ಎಂಬ ಎಡಬಿಡಂಗಿ ತನವನ್ನು ಕಾಣುತ್ತೇವೆ. ಹೀಗೆ ಒಂದೆಡೆ ದೈವತ್ವಕ್ಕೇರಿಸಿ ಪುರುಷನ ಅನ್ಯಾಯ, ಅತ್ಯಾಚಾರಗಳನ್ನು ಸಹಿಸಿಕೊಂಡು ಹೋಗುವ ಆದರ್ಶೀಕರಣದಲ್ಲಿ ಪರವಶ ಮಾಡಿದರು. ಇನ್ನೊಂದೆಡೆ ವ್ಯಕ್ತಿಸಹಜ ದೌರ್ಬಲ್ಯಗಳನ್ನ ಹೆಣ್ಣು ಜಾತಿಯ ಹಣೆಗೆ ಬಿಗಿದು ರಾಕ್ಷಸತ್ವವನ್ನು ಆರೋಪಿಸಿ ತುಳಿದರು. ಇಂಥ ಉಸಿರುಗಟ್ಟಿಸುವ ವಾತಾವರಣದಲ್ಲಿ ಮಹಿಳೆ ಮಾನಸಿಕವಾಗಿ ನಲುಗಿ ಹೋದಳು. ಇದರಿಂದಾಗಿ ಹೆಣ್ಣಿನ ಸಂವೇದನೆಗಳಿಗೆ, ಸಂವೇದನೆಗಳ ಅಭಿವ್ಯಕ್ತಿಗೆ ಕೊಡಲಿಯೇಟು ಬಿತ್ತು.

ಇಷ್ಟಿದ್ದಾಗಲೂ, ವೇದಕಾಲಿನ ಮಹಿಳೆಯ ಸ್ಥಾನಮಾನದ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತ, ದಾಖಲೆಗಳಿಗಾಗಿ ಮೈತ್ರೇಯಿ ಗಾರ್ಗಿಯರ ಮೊರೆ ಹೋಗುವ ಮೂರ್ಖತನವನ್ನು ಮಾಡುತ್ತೇವೆ. ನಮ್ಮ ಪರಂಪರೆಯಲ್ಲಿ ತೀರಾ ಇತ್ತೀಚಿನವರೆಗೂ ಯಾವ್ಯಾವುದೋ ರಂಗದಲ್ಲಿ ಶಿಖರಕ್ಕೇರಿದ ಒಬ್ಬಿಬ್ಬ ಮಹಿಳೆಯರು ಕಂಡು ಬಂದಿದ್ದಾರೆ. ಆದರೆ ಈ ನಿದರ್ಶನಗಳು ಪ್ರತಿಕೂಲ ಪರಿಸರದ ಮಧ್ಯದಲ್ಲೂ ತಲೆಯೆತ್ತಿ ನಿಂತವರ, ಇಲ್ಲವೇ ಒದಗಿದ ಕಿಂಚಿತ್ ಅವಕಾಶಗಳನ್ನು ದುಡಿಸಿಕೊಂಡು ಬೆಳೆದು ನಿಂತವರ ಉದಾಹರಣೆಗಳೇ ವಿನಃ ಇವರು ಇಡೀ ಸ್ತ್ರೀ ಸಂಕುಲದ ಪ್ರತಿನಿಧಿಗಳಲ್ಲ.

ವಿದ್ಯಾಭ್ಯಾಸದಂಥ ಅತ್ಯವಶ್ಯ ಅಂಶದಿಂದಲೂ ವಂಚಿತಳಾದ ಮಹಿಳೆಗೆ ಸಾಹಿತ್ಯ ರಚನೆ ಅಷ್ಟು ಸಲೀಸಾಗಿರಲಿಲ್ಲ. ಕಂತಿಯನ್ನು ಕನ್ನಡದ ಮೊದಲ ಕವಯಿತ್ರಿ ಎಂದು ಒಪ್ಪಿಕೊಳ್ಳುವಲ್ಲಿ ಚಾರಿತ್ರಿಕ ದಾಖಲೆಗಳ ಕೊರತೆಯಿದೆ. ಹೆಣ್ಣನ್ನು ಭೋಗದ ವಸ್ತುವನ್ನಾಗಿ, ದುಡಿಯುವ ಪ್ರಾಣಿಯನ್ನಾಗಿ, ಮಾಗಾಟ ಮಾಡುವ ಸರಕನ್ನಾಗಿ ಮಾಡಿಕೊಂಡ ಈ ನಾಡಿನ ಸಾಂಸ್ಕೃತಿಕ ಸಂದರ್ಭ ಮೈ ಹೊರಳಿಸಿಕೊಂಡಿದ್ದು ವಚನ ಚಳುವಳಿಯ ಕಾಲದಲ್ಲಿ ಚಾರಿತ್ರಿಕ ಮಹತ್ವ ಪಡೆದ ಈ ಸಾಂದರ್ಭಿಕತೆಯಲ್ಲಿ ಹೆಣ್ಣಿನ ಸಮಾನತೆಯ ಸಹಜ ಸಂವೇದನೆಯ ಉತ್ತುಂಗ ನಿದರ್ಶನವಾಗಿ ಬರುವುದು “ಶರಣೆಯರ ಪರಂಪರೆ” ಮೊಟ್ಟ ಮೊದಲು ಬಾರಿಗೆ—

“ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ಒಳಗೆ ಸುಳಿವಾತ್ಮನು
ಹೆಣ್ಣೂ ಅಲ್ಲ ಗಂಡೂ ಅಲ್ಲ ಕಾಣಾ ರಾಮನಾಥ”

ಎಂಬ ಸಮಾನತೆಯ ಕಹಳೆ ಮೊಳಗಿತು.

ಅಕ್ಕ ಈ ಲೋಕದ ಗಂಡರನ್ನ ಒಲೆಯೊಳಗಿಕ್ಕುವ ಧೈರ್ಯ ತೋರಿದ್ದು ಚೆನ್ನಮಲ್ಲಿಕಾರ್ಜುನನ ಆಶ್ರಯದಲ್ಲೇ ಆದರೂ ಪುರಾಣ, ಶಾಸ್ತ್ರಗಳನ್ನೆಲ್ಲ ನುಚ್ಚು ತೌಡು ಎಂದು ತಿರಸ್ಕರಿಸಿ, ಬರಿ ಬತ್ತಲೆಯಾಗಿ ಈ ಸಮಾಜಕ್ಕೆ ಸಡ್ಡು ಹೊಡೆದು ನಿಂತದ್ದು ಕೇವಲ ಭಕ್ತಿಯ ಊರ್ಧ್ವಾವಸ್ಥೆಯಲ್ಲಲ್ಲ. “ಹೆಣ್ಣು ಕಾಮ ಕೇಂದ್ರವೇ ಹೊರತೂ ಇನ್ನೇನಲ್ಲ” ಎಂಬ ಪರಂಪರಾಗತ ಧೋರಣೆಯನ್ನು ಧಿಕ್ಕರಿಸುವ ಅನಿವಾರ್ಯತೆಯಲ್ಲಿ, ಗೊಗ್ಗವ್ವೆಯಂಥ ಶೂದ್ರ ವಚನಕಾರ್ತಿ—

“ಗಂಡು ಮೋಹಿಸಿ ಹೆಣ್ಣ ಹಿಡಿದಡೆ
ಅದು ಒಬ್ಬರ ಒಡವೆಯೆಂದರಿಯಬೇಕು,
ಹೆಣ್ಣು ಮೋಹಿಸಿ ಗಂಡ ಹಿಡಿದಡೆ
ಉತ್ತರವಾವುದೆಂದರಿಯಬೇಕು ?”

ಎಂದು ಪ್ರಶ್ನಿಸುವಲ್ಲಿ ಪ್ರತಿಭಟನೆಯ ಕಾವಿದೆ. ಕೇವಲ ತನ್ನ ಸಮಾನತೆಗಾಗಿ ಮಾತ್ರವಲ್ಲ, ಸಾಮಾಜಿಕ ವೈಷಮ್ಯತೆಗೂ ಸ್ತ್ರೀ ಸ್ಪಂದಿಸಿದ ಅತ್ಯುತ್ತಮ ನಿದರ್ಶನಗಳನ್ನು ಈ ಕಾಲಘಟ್ಟದಲ್ಲಿ ಕಾಣುತ್ತೇವೆ.

"ಕುರಿಕೋಳಿ ಕಿರಿಮೀನು ತಿಂಬವರಿಗೆಲ್ಲ
ಕುಲಜ ಕುಲಜರೆಂದೆಂಬರು
ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ
ವಾದಿಗ ಕೀಳು ಜಾತಿಯೆಂಬರು.
ಅವರೇಕೆ ಕೀಳುಜಾತಿಯಾದಾರು, ಜಾತಿಗಳು
ನೀವೇಕೆ ಕೀಳಾದಿರೊ

ಎಂಬ ಕಾಳವ್ವೆಯಂಥ ಶೂದ್ರ ವಚನಕಾರ್ತಿಯ ಸವಾಲಿನ ವೈಚಾರಿಕತೆ ಬೆರಗುಗೊಳಿಸುವಂತಿದೆ. ವಚನ ಚಳುವಳಿಯ ಸಂದರ್ಭದಲ್ಲಿ ನಿರ್ಮಾಣಗೊಂಡ ಜಾಗೃತ ಭೂಮಿಕೆ, ಮಹಿಳೆಯರ ಸಂವೇದನೆಯ ಅಭಿವ್ಯಕ್ತಿಗೆ ಸ್ಪಷ್ಟ ಹಾಗೂ ಸತ್ವಪೂರ್ಣ ನೆಲೆಯನ್ನೊದಗಿಸಿತು.

ಈ ಚಳುವಳಿಯ ಕಾವು ತಗ್ಗಿದಾಗ ಮಹಾಪೂರವೊಂದು ಬಂದಿಳಿದ ನಂತರದ ಸ್ಥಿತಿಯಂತೆ ಪರಿಸ್ಥಿತಿ ನಿರ್ಮಾಣಗೊಂಡಿತು. ಮುಂದೆ ಜಂಥ ಮಹಿಳಾ ಸಾಹಿತ್ಯ ಪರಂಪರೆಯು ಪ್ರಬಲ ಹಿಡಿತದಲ್ಲೇ ತಲೆಯೆತ್ತಿದ್ದು ನೋಡಿದರೆ- ಸ್ತ್ರೀ ಎಷ್ಟು ಗಾಢವಾಗಿ ತನ್ನ ಪರಿಸ್ಥಿತಿಗೆ ಒಗ್ಗಿಕೊಂಡು ಬಿಟ್ಟಿದ್ದಳೆಂಬುದು ವೇದ್ಯವಾಗುತ್ತದೆ. ಹೀಗಾಗಿ ಶಿಷ್ಟ ಪರಂಪರೆಯೊಳಗೇ ಉತ್ತಮ ಬದುಕಿನ ಹಂಬಲ ಮುಂದಿನ ಮಹಿಳಾ ಸಾಹಿತ್ಯದ ಒಂದನಿಯಾಯಿತು. ಚಿಕ್ಕದೇವರಾಜನ ಕಾಲದ ಸಂಚಿ ಹೊನ್ನಮ್ಮನ "ಹದಿಬದೆಯ ಧರ್ಮ" ಇದಕ್ಕೊಂದು ಉತ್ತಮ ಉದಾಹರಣೆ.

"ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದಾ ಗಾವಿಲರು
"ಕವರನಾದೊಡೆ ಬುದ [illegible]ವೇನವರಿಂದ
ಕುವರಿಯಾದೊಡೆ ಕುಂದೇನು? "

—ಎಂದು ಹೆಣ್ಣಿನ ಮಹತ್ವವನ್ನು ಎತ್ತಿ ಹೇಳುವ ಹೊನ್ನಮ್ಮನೇ,

"ತನ್ನಿನಿಯನೊಳಿಗದವಳಪ್ಪುದು ಸಂಪನ್ನತೆಯೆಂದು ಬಗೆವುದು"

"ಬಸಿರೊಳು ಬಂ[illegible] ಕುವರನಾದೊ[illegible]ವೇಸಂ
ಪೊಸವರೆಯುದ ಪರ[illegible]
ಒಸೆದು ನಿಟ್ಟಿಸಿಯೊಡಲೋಜೆಯೊಳ್ಪುಗಳ್ ಬ
ಣ್ಣಿಸಲಾಗದು ಭಾವೆಯರು"

—ಎಂದಿರುವ ವೈರುಧ್ಯದಲ್ಲಿ ಕಾಲದ ತಾಕಲಾಟ ವ್ಯಕ್ತವಾದಂತಿದೆ. ಹೊನ್ನಮ್ಮನ ಈ ಮಾತು— "ಹೆಣ್ಣು ತನ್ನ ತಂದೆಯೊಂದಿಗೂ ಸಹೋದರನೊಂದಿಗೂ, ಮಗನೊಂದಿಗೂ ಏಕಾಂತದಲ್ಲಿ ಇರಬಾರದು" ಎಂಬ ಮನುವಿನ ವಿಕೃತ ವಾಕ್ಯದ ಸರಳೀಕರಣವೇನೋ ಅನ್ನಿಸುತ್ತದೆ. ವೈಷ್ಣವ ಭಕ್ತಿ ಮಾರ್ಗದ ಸಂದರ್ಭದಲ್ಲಿ ತಮ್ಮ ವೈಯಕ್ತಿಕ ತೀವ್ರ ತುಡಿತದಿಂದ ಸಾಹಿತ್ಯ ರಚಿಸಿದ ಹೆಳವನಕಟ್ಟೆ ಗಿರಿಯಮ್ಮ, ಚೆಲುವಾಂಬೆ, ಶೃಂಗಾರಮ್ಮ ಭೀಮಪ್ಪ ಮುಂತಾದವರ ಕೃತಿಗಳ ಮುಖ್ಯ ನಿಲುವು ಭಕ್ತಿಯ ತೀವ್ರತೆಯಾಗಿತ್ತು.

ಶಿಷ್ಟ ಸಾಹಿತ್ಯದಲ್ಲಿಯ ಪರಿಸ್ಥಿತಿ ಹೀಗಿದ್ದರೆ, ಜಾನಪದ ಪರಂಪರೆಯಲ್ಲಿ ಕವಯಿತ್ರಿಯರ ಮಹಾಪೂರವೇ ಆಗಿ ಹೋಗಿದ್ದನ್ನು ಕಾಣುತ್ತೇವೆ. ಹೆಣ್ಣಿನ ಸ್ಥಾನ ಮಾನಗಳು ಶಿಷ್ಟ ಪರಂಪರೆಗಿಂತ ಭಿನ್ನವಲ್ಲದಿದ್ದರೂ, ಪುರುಷನಿಗೆ ಹೆಗಲೆಣೆಯಾಗಿ ಹೊರಗೂ ದುಡಿಯುತ್ತಿದ್ದ ಗ್ರಾಮೀಣ ಹೆಣ್ಣಿನ ಆತ್ಮವಿಶ್ವಾಸದ ಸಹನದನಿಯಲ್ಲಿ ಪ್ರತಿಭಟನೆಯ ಕಾವು ತುಂಬಿದೆ. "ಅತ್ತೆಯ ಮನೆಯಲ್ಲಿ ಮುತ್ತಾಗಿ ಇರಬೇಕ, ಹೊತ್ತಾಗಿ ನೀಡಿದರೂ ಉಣಬೇಕ" ಎಂಬ ನಿಯಂತ್ರಣದಲ್ಲಿ, ಅತ್ತೆ ಮಾವರ ಗಂಜಿ ಸತ್ತೇಳು ನೆರೆಗಂಜಿ ಬದುಕಬೇಕಾದವಳು, ಮನಬಿಚ್ಚಿ ಮಾತಾಡುವ ನಗುವ ಹಕ್ಕನ್ನೂ ಕಳಕೊಂಡವಳು:

ಬಾಲಕಿಲ್ಲದ ಬಾಲಿದ್ಯಾತರ ಜನ್ಮ
ಬಾಡಿಗಿ ಎತ್ತು ದುಡಿದ್ಹಾಂಗ| ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದ್ಹಾಂಗ ||

ಎಂದು ತನ್ನ ಬಾಳುವೆಯನ್ನು ನಿಯತ ಉದ್ದೇಶಕ್ಕಾಗಿ ಕಟ್ಟಿಕೊಂಡವಳು ಇವಳಾಗಿದ್ದರೂ— "ಬಾಳೆ ಕಡಿದರೆ ತೋಟ ಹಾಳಾಗಬಲ್ಲದೆ! ಬಾಳಿಸಲಾರದ ಮಡದಿಯ ಬಿಟ್ಟರೆ ಬಾಳೆ ಹಣ್ಣೇನ ಕೊಳೆಯಾಕ" ಎಂದು ತೋರುವ ದಿಟ್ಟತನ; "ಬಿಟ್ಟಡಿಕೊಳ್ಳುವ ವೈಯ್ಯ ಮನಿ ಮುಂದ ಬಿಜ್ಜಗತ್ತ್ಯಾಗಿ ಹೋಳಿದೇನ" ಎಂದು ತೋರುವ ಧೈರ್ಯ ಅವಳ ಅಂತಃಸತ್ವಕ್ಕೆ ಸಾಕ್ಷಿಯಾಗಿದೆ. ಅವಳಿಗೆ ತನ್ನ ಸ್ಥಿತಿಯ ಬಗ್ಗೆ ಇದ್ದ ಎಚ್ಚರ

"ಇದು ಜನ್ಮತಃ ಬಂದ ಪ್ರಾರಬ್ಧ" ಎಂಬ ತಿಳುವಳಿಕೆಯಲ್ಲಿ ಪರ್ಯವಸಾನಗೊಂಡಿದ್ದರಿಂದ—"ಹೆಣ್ಣು ಆಗುದಕಿಂತ ಮಣ್ಣು ಆಗುದು ಲೇಸು"—ಎಂದು ತನ್ನ ಉರಿಯಲ್ಲಿ ತನ್ನನ್ನೇ ಬೇಯಿಸಿಕೊಂಡು ತೃಪ್ತಿ ಹೊಂದುತ್ತಾಳೆ.

ಹತ್ತೊಂಬತ್ತನೆಯ ಶತಮಾನದ ಆದಿಭಾಗದಿಂದ ಸಾಮಾಜಿಕವಾಗಿ ತಲೆದೋರಿದ ಹೊಸ ಪರಿಸರ ಮತ್ತು ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದ ಮಹಿಳೆಯರ ಜೀವನ ಕುರಿತ ಎಚ್ಚರ ಕಾಣತೊಡಗಿತು. ಬ್ರಹ್ಮ ಸಮಾಜ, ಆರ್ಯ ಸಮಾಜವನ್ನೊಳಗೊಂಡಂತೆ ಅನೇಕ ಸಮಾಜ ಸುಧಾರಕ ಸಂಸ್ಥೆಗಳು ಮಾನವೀಯತೆಯ ದೃಷ್ಟಿಯಿಂದ ಸ್ತ್ರೀ ಸಮಸ್ಯೆಗಳತ್ತ ಗಮನ ಕೊಟ್ಟವು. ಬಾಲ್ಯ ವಿವಾಹ, ವಿಧವಾ ಸಮಸ್ಯೆ, ಅಸಮ ವಿವಾಹ, ಸತೀ ಪದ್ಧತಿ, ಸ್ತ್ರೀ ವಿದ್ಯಾಭ್ಯಾಸದಂಥ ಜ್ವಲಂತ ಸಮಸ್ಯೆಗಳು ಪರಿಹಾರಕ್ಕಾಗಿ ಪರಿತಪಿಸುತ್ತಿದ್ದವು. ೧೯೧೭ ರ ಸುಮಾರಿಗೆ ಸ್ತ್ರೀಯರ ರಾಜಕೀಯ ಹಕ್ಕಿನ ಒಗ್ಗಿಯೂ ಸಂಘಟನೆ ನಡೆಯತೊಡಗಿತು. ೧೮-೧೯ ನೇಯ ಶತಮಾನದಲ್ಲಿ ಇಂಗ್ಲೀಷ್ ಅಷ್ಟೇ ಏಕೆ ತಮಿಳು ಮಲಯಾಳಂ ಮರಾಠಿ ಭಾಷೆಗಳಲ್ಲೂ ಜೀವನವನ್ನು ವಾಸ್ತವವಾಗಿ ಚಿತ್ರಿಸುವ; ಸೀಮಿತ ಅನುಭವವನ್ನೂ ಸಂಕೀರ್ಣವಾಗಿ ಅಭಿವ್ಯಕ್ತಿಸಿದ ಮಹಿಳಾ ಕೃತಿಗಳು ಬಂದದ್ದನ್ನ ನೋಡಿದರೆ ಕರ್ನಾಟಕದಲ್ಲಿ ಉಂಟಾದ ಜಾಗೃತಿ ವಿಳಂಬವೆನಿಸುತ್ತದೆ. ಬಹುಶಃ ಇದಕ್ಕೆ ಕಾರಣ ರಾಷ್ಟ್ರಮಟ್ಟದಲ್ಲಾದ ಜಾಗೃತಿಗೆ ಕರ್ನಾಟಕ ತನ್ನ ದನಿ ಕೂಡಿಸುವುದರಲ್ಲಾದ ವಿಳಂಬವೇ ಇರಬಹುದು.

ಇಂಗ್ಲೀಷ್ ವಿದ್ಯಾಭ್ಯಾಸದ ಫಲ, ಸಮಾಜ ಸುಧಾರಣೆಯ ಕಳಕಳಿಯಿಂದಾಗಿ ಈ ನೆಲದ ಮಿಡಿತಕ್ಕೆ ಹೊಸ ಕಂಪನ ಬಂದಿತ್ತು. ಒಂದೆಡೆ ಚಾರಿತ್ರಿಕವಾಗಿ ಸಂಸ್ಥಾನಾಧಿಪತಿಗಳೆಲ್ಲ ನಿರ್ನಾಮವಾಗಿದ್ದರೆ, ಇನ್ನೊಂದೆಡೆ ಭಾರತೀಯ ಮನಸ್ಸು ಬ್ರಿಟಿಷ್ ಅಧಿಪತ್ಯವನ್ನು ತಿರಸ್ಕರಿಸುತ್ತಿತ್ತು. ಇಂಥ ಸಂಕ್ರಮಣ ಕಾಲದಲ್ಲಿ ಹಳೆಯ ಕಟ್ಟು-ಪಾಡುಗಳನ್ನು ತಿರಸ್ಕರಿಸಿ ಅಭೂತಪೂರ್ವ ಮಾನವೀಯತೆಯ ಕಾಳಜಿಯಲ್ಲಿ ನಾಡು-ನುಡಿ ನಿಸರ್ಗ ಪ್ರೇಮಗಳ ಆದರ್ಶೀಕೃತ ನಿಲುವಿನ ಗೇಯ ಪೂರ್ಣ ಉತ್ಸಾಹದಲ್ಲಿ ನವೋದಯ ಕಾವ್ಯ ಪರಂಪರೆ ಹುಟ್ಟಿಕೊಂಡಿತು. ಸಿ. ವೀರಣ್ಣನವರು ಗುರುತಿಸುವಂತೆ—"ಈ ಕಾಲದಲ್ಲಿ ಬರೆಯಲಾರಂಭಿಸಿದವರೆಲ್ಲ ಮಧ್ಯಮ ವರ್ಗದ ಇಂಗ್ಲೀಷ್ ವಿದ್ಯಾಭ್ಯಾಸಕ್ಕೆ ಪರಿಚಿತರಾದುದರಿಂದ ಅವರ ಕನಸುಗಳಿಗೆ ಈ ನೆಲದ ವಾಸ್ತವ ಸರಿಯಾದ ಭೂಮಿಕೆಯಾಗಲಿಲ್ಲ. ಇದರಿಂದ ಕವಿ ಬಂಡವಾಳ ಶಾಹಿಗೆ ಮುಖಾಮುಖಿಯಾಗದೇ ಪ್ರಕೃತಿಯತ್ತ, ಅಲೌಕಿಕ ಆನಂದ ಕಲ್ಪಿಸಿಕೊಳ್ಳುವತ್ತ ಮುಖಮಾಡಿದ. ವಸ್ತು ಕವಿಯ ಮನೋ ಪ್ರಪಂಚದ್ದಾಗಿ ಪಾತ್ರಗಳೆಲ್ಲ ಭಾವನಾತ್ಮಕ ಊಹೆಗಳಾದವು."

"........ತಮ್ಮ ಸಂಸಾರಗಳ ಬಂಧು ಬಳಗಗಳ ಮಧ್ಯೆ ಒಳ್ಳೆಯ ಪತ್ನಿಯರಾಗಿ, ತಾಯಂದಿರಾಗಿ, ವಿದ್ಯಾರ್ಥಿನಿಯರು ತಮ್ಮ ಮುಂದಿನ ಜೀವನವನ್ನು ನಡೆಸಬೇಕು" ಎಂಬುದನ್ನು ಗಮನದಲ್ಲಿಟ್ಟುಕೊಂಡು ನೀಡಿದ ಶಿಕ್ಷಣದಿಂದಾಗಿಯಾದರೂ ಅಕ್ಷರ ಜ್ಞಾನ ಕಲಿತವರು ತಮ್ಮ ಸಂವೇದನೆಗಳನ್ನು ಮೂರ್ತರೂಪವಾಗಿಸತೊಡಗಿದರು. ತಿರುಮಲಾಂಬ, ಕಲ್ಯಾಣಮ್ಮ, ಶ್ಯಾಮಲಾದೇವಿ, ಗೌರಮ್ಮ, ಎಚ್. ವಿ. ಸಾವಿತ್ರಮ್ಮ ಗಿರಿಬಾಲೆ ಮುಂತಾದವರನ್ನು ಇಲ್ಲಿ ಹೆಸರಿಸಬಹುದು. ಸೀಮಿತ ಉದ್ದೇಶವನ್ನಿಟ್ಟುಕೊಂಡು ಪಡೆದ ಅಕ್ಷರ ಜ್ಞಾನ, ಸೀಮಿತ ಅನುಭವದ ಪರಿಣಾಮದಿಂದಾಗಿ ಸ್ತ್ರೀ ಅಭಿವ್ಯಕ್ತಿ ಜನಪ್ರಿಯ ಕಥೆ ಕಾದಂಬರಿಗಳನ್ನಾಯ್ದುಕೊಳ್ಳುವುದು ಅನಿವಾರ್ಯವಾಯಿತು. ಅದರಲ್ಲೂ "ಸಾಂಪ್ರದಾಯಿಕವಾಗಿ ಸ್ತ್ರೀಯರು ನಿರ್ವಹಿಸುವ ಪಾತ್ರಗಳಿಗೆ ಈ ಶಿಕ್ಷಣ ಅಡ್ಡಿಯಾದೀತೆಂಬ ವ್ಯವಸ್ಥೆಯ ಭಯ ಲೇಖಕಿಯರಲ್ಲೂ ಪ್ರತಿಬಿಂಬಿಸಿ ಸ್ತ್ರೀ ಶಿಕ್ಷಣದ ವಿರುದ್ಧವಾಗಿಯೂ ನಿಂತದ್ದುಂಟು. ಅಥವಾ ಸ್ತ್ರೀ ಶಿಕ್ಷಣದ ಅಪಾಯವನ್ನು ಮುಂದೊಡ್ಡಿದ್ದೂ ಉಂಟು" ಎಂಬ ಅಂಶ ಸ್ತ್ರೀಯರು ಪರಂಪರೆಯಲ್ಲಿ ಎಷ್ಟು ಆಳವಾಗಿ ಇಳಿದುಹೋಗಿದ್ದರೆಂಬುದಕ್ಕೆ ಸಾಕ್ಷಿಯಾಗಿದೆ.

ನವೋದಯದ ಸಂದರ್ಭದಲ್ಲಿ ನಮ್ಮ ಸಾಹಿತಿಗಳಿಂದ ಚಿತ್ರಿತಗೊಂಡಿರುವ ಸ್ತ್ರೀ ಪಾತ್ರಗಳು ಪರಂಪರಾಗತ ಮೌಲ್ಯವನ್ನು ಒಪ್ಪಿಕೊಳ್ಳುವ ಆದರ್ಶೀಕೃತ ನಿಲುವಿನದಾಗಿರುವಾಗ ಲೇಖಕಿಯರು ಅಂದಿನ ಮಧ್ಯಮ ಮತ್ತು ಮೇಲ್ವರ್ಗದ ಮಹಿಳೆಯರ ಸಮಸ್ಯೆಗಳಾದ ಬಾಲ್ಯ ವಿವಾಹ, ವಿಧವಾ ವಿವಾಹ, ವೇಶ್ಯಾ ಸಮಸ್ಯೆ, ವರದಕ್ಷಿಣೆಯಂಥವುಗಳಿಗೆ ಸ್ಪಂದಿಸಿದ್ದಾರೆ. ಉದಾ

ಹರಣೆಗಾಗಿ ಅವಲೋಕಿಸುವುದಾದರೆ, ೧೯೪೮ರಲ್ಲಿ ಪ್ರಕಟವಾದ ದೇವಾಂಗನಾ ಶಾಸ್ತ್ರಿಯವರ "ವೇಣಿ ಸಂಹಾರ" ಎಂಬ ಕಥೆಯಲ್ಲಿ ಲೇಖಕಿ ಕೇಶಮುಂಡನದ ದುರಂತವನ್ನು ಹರಿತವಾದ ವ್ಯಂಗ್ಯದಲ್ಲಿ ಹಿಡಿದಿಟ್ಟಿದ್ದಾರೆ.

ಈ ಸಂದರ್ಭದಲ್ಲಿ ತಮ್ಮ ಸಂವೇದನೆಗಳ ಅಭಿವ್ಯಕ್ತಿಗಾಗಿ ಕಾವ್ಯ ಮಾಧ್ಯಮವನ್ನು ಆಯ್ದುಕೊಂಡ ಕವಯಿತ್ರಿಯರು ವಿರಳ. ಜಯದೇವಿ ತಾಯಿ ಲಿಗಾಡೆ ಶಾಂತಾದೇವಿ ಮಾಳವಾಡ, ಬೆಳಗೆರೆ ಜಾನಕಮ್ಮ ಮುಂತಾದ ಕೆಲವರನ್ನಿಲ್ಲಿ ಹೆಸರಿಸಬಹುದು. ನವೋದಯ ಸಂದರ್ಭದ ಧೋರಣೆಗಳಿಂದ ಕವಯಿತ್ರಿಯರು ಭಿನ್ನರಾಗಿರಲಿಲ್ಲ, ಬೆಳಗೆರೆ ಜಾನಕಮ್ಮ—

"ಹೆಣ್ಣೆ ನೀ ಗಂಡನ ಕೂಡಿಕೊಂಡ್ಯ
ನೋಡು, ಮಂಡೂಕ ಸರ್ಪದ ನೆಳಲಿಗೆ
ಹೋದಂತೆ
ಬಂಡಿಗೆ ಬಸವನು ಶಿರಬಾಗಿಕೊಂಡಂತೆ॥"

—ಎಂದು ವ್ಯಾಕುಲತೆ–ಎಚ್ಚರ ವ್ಯಕ್ತಪಡಿಸಿದರೂ "ಹೆಣ್ತನದಿ ತುಂಬಿರುವ ಮುಕ್ತಿಪಥವೇ ಸಾಕು"— ಎಂದು ಸಮಾಧಾನವನ್ನೂ ಕೊಡುತ್ತಾರೆ.

ನವೋದಯದ ಆದರ್ಶ ಕಾಲ್ಪನಿಕತೆಯನ್ನು ತಿರಸ್ಕರಿಸಿ ಜೀವನದ ಸಂಕಟದ ಕಡೆಗೆ ಮುಖಮಾಡಿ ಈ ಒದುಕು ಈಗಿರುವುದಕ್ಕಿಂತಲೂ ಸುಂದರವಾಗಿರಬೇಕು, ಎಂಬ ಹಂಬಲಿಕೆಯಲ್ಲಿ, ಮಾರ್ಕ್ಸ್‌ವಾದದ ಪ್ರಭಾವದಲ್ಲಿ ಬಂದ ಪ್ರಗತಿಪಂಥ ಸ್ತ್ರೀ ಸಂವೇದನೆಗಳಿಗೆ ಹೊಸ ಸ್ಪರ್ಶವನ್ನು ನೀಡಿತು. ಸಮಾಜ ವಿಮರ್ಶೆಯ ಸೈದ್ಧಾಂತಿಕ ಹಿನ್ನೆಲೆಯಿಂದಾಗಿ ಸ್ತ್ರೀ ಸಮಸ್ಯೆಗಳತ್ತ ಹೆಚ್ಚಿನ ಒಳನೋಟ ಸಾಧ್ಯವಾಯಿತು. ಹೆಣ್ಣಿನ ಸಮಸ್ಯೆಗಳನ್ನು ಮನೋವಿಶ್ಲೇಷಣಾತ್ಮಕ ದೃಷ್ಟಿಕೋನದಿಂದ ನೋಡುವ ಮತ್ತು ಇವುಗಳ ಮೂಲವನ್ನು ವರ್ಗ ವೈಷಮ್ಯದಲ್ಲಿ ಕಾಡ ಎಚ್ಚರದಲ್ಲಿ ಪುರುಷ ಪ್ರಧಾನ ಕ್ರೌರ್ಯದ ಚಿತ್ರಣ ತ್ರಿವೇಣಿ. ಅನುಪಮಾ ನಿರಂಜನ, ಎಂ. ಕೆ. ಜಯಲಕ್ಷ್ಮಿ ಮುಂತಾದವರ ಕೃತಿಗಳಲ್ಲಿ ಬಂದಿವೆ.

ಪ್ರಗತಿಪಂಥ ತನ್ನ ವೈಭವೀಕರಣದಲ್ಲಿ ಕಲಾತ್ಮಕತೆಯ ಸೋಲಿಗೆ ಇಳಿದಾಗ, ಬಂಡವಾಳಶಾಹಿಯ ಕ್ರೌರ್ಯದಲ್ಲಿ ವ್ಯಕ್ತಿತ್ವ ನಲುಗಿ, ಪ್ರತಿಯೊಬ್ಬನೂ ಒಂದೊಂದು ನಡುಗಡ್ಡೆಯಂತಾಗಿ, ಮಾನವೀಯ ಸಂಬಂಧಗಳು ಕುಸಿದಾಗ— ಇಂಥದೇ ಕ್ರೌರ್ಯಕ್ಕೆ ಒಳಗಾದ ಏಟ್ಸ್, ಏಡನ್, ಎಲಿಯಟ್‌ರ ಪ್ರಭಾವಕ್ಕೆ ನಮ್ಮ ಕವಿಗಳು ಒಳಗಾದರು. ಪಾಶ್ಚಿಮಾತ್ಯರ ಏಕಾಕಿಯತೆ, ಏಕಾಂಗಿತನಗಳ ಗಾಢ ಅನುಭವದಲ್ಲಿ ಅಭಿವ್ಯಕ್ತಿಯ ರೀತಿಗೆ ಹೆಚ್ಚಿನ ಒತ್ತುಕೊಟ್ಟು ನವ್ಯ ಹುಟ್ಟಿತು. ಆದರೆ ಸ್ತ್ರೀಯನ್ನು ನೋಡುವ ಪರಂಪರಾಗತ ದೃಷ್ಟಿಕೋನದಲ್ಲಿ ಮಾತ್ರ ನವ್ಯರು "ನವ್ಯ" ಎನಿಸಿಕೊಳ್ಳಲಿಲ್ಲ. ನವ್ಯದ "ಕಾಮ ಕೇಂದ್ರಿತ ಧೋರಣೆ" ಸ್ತ್ರೀ ಸಂವೇದನೆಗಳಿಗೆ ತಡೆಯೊಡ್ಡಿತು. ಸಾಮಾಜಿಕವಾಗಿ ಮಹಿಳೆ ಅದೇ ಆಗ ಎಚ್ಚೆತ್ತುಕೊಳ್ಳತೊಡಗಿದಾಗಲೂ ಮುಕ್ತ ಸಾಹಿತ್ಯಿಕ ಸಂವೇದನೆ ಅವರಿಂದ ಸಾಧ್ಯವಾಗದಿರಲು ಇದೂ ಒಂದು ಕಾರಣ. ನವ್ಯ ಹೆಣ್ಣನ್ನು ಮಾಂಸದ ಮುದ್ದೆಯಾಗಿ, ಕಾಮ ಕೆಣಕುವ ವಸ್ತುವಾಗಿ ಚಿತ್ರಿಸಿದ್ದು ಮಹಿಳಾ ಪರಂಪರಾಗತ ಮನಸ್ಸುಗಳಿಗೆ ವೈಚಾರಿಕ ಬರವಣಿಗೆ ಎಡಚೆಡಚು ಅನ್ನಿಸಿತು. ಇದರಿಂದಾಗಿ ಅವರು ಮಾತ್ರ ತಮ್ಮ ಸಂವೇದನೆಗಳನ್ನು ಜನಪ್ರಿಯ ಕಥೆ ಕಾದಂಬರಿಗಳಲ್ಲೇ ಇಳಿಸಿದರು. ಈ ಸಂದರ್ಭದಲ್ಲಿ ವೈಚಾರಿಕತೆಯೆಡೆಗೆ ತುಡಿದ ವೀಣಾ ಶಾಂತೇಶ್ವರ ರಾಜಲಕ್ಷ್ಮಿ, ಎನ್. ರಾವ್ ಮುಂತಾದ ಕೆಲವರು ಅಭಿವ್ಯಕ್ತಿಯ ರೀತಿ ಅನುಭವದ. ಸಂಕೀರ್ಣತೆಗಳನ್ನು ಹಿಡಿದಿಡುವಲ್ಲಿ ನವ್ಯದ ಪ್ರಭಾವಕ್ಕೆ ಒಳಗಾದರೂ; ಧೋರಣೆ ಬಂಡಾಯದ್ದೇ ಆಗಿತ್ತೆಂಬುದು "ಬಂಡಾಯ" ಮಹಿಳಾ ಅಭಿವ್ಯಕ್ತಿಯ ಆಂತರಿಕ ಮಿಡಿತವಾಗಿದ್ದ ಸತ್ಯವನ್ನು ಒಡೆದು ಕಾಣಿಸುತ್ತದೆ.

ನವ್ಯ ಕೆಲವೇ ವರ್ಗದ ಜನರೊಂದಿಗೆ ಸಂವಾದಿಸುತ್ತ ಸಮಾಜ ವಿಮುಖವಾದಂತೆ; ಜಾತಿ–ವರ್ಗ–ಧರ್ಮಗಳ ಸೂಕ್ಷ್ಮಾತಿ ಸೂಕ್ಷ್ಮ ಸಂಬಂಧ ಹೊಂದಿದ ಈ ಮಣ್ಣಿನಲ್ಲಿ ತಾಂಡವವಾಡುತ್ತಿರುವ ಅನಕ್ಷರತೆ, ಅಮಾನವೀಯತೆ, ಹಸಿವು, ಯಾತನೆ, ಶೋಷಣೆಗಳಂಥ ವಾಸ್ತವ ಸಾಹಿತ್ಯದ ಇರುವನ್ನೇ ಪ್ರಶ್ನಿಸುವ ಅನಿವಾರ್ಯತೆಯನ್ನು ಸೃಷ್ಟಿಸಿದವು. ಕಾಲದ ವಾಸ್ತವತೆಯನ್ನು ಗರ್ಭೀಕರಿಸಿಕೊಳ್ಳದೆ ವರ್ತಮಾನವನ್ನು ಕಳೆದುಕೊಳ್ಳುವ ಕವಿಯನ್ನು ಚರಿತ್ರೆ ಕ್ಷಮಿಸಲಾರದು ಎಂಬ

ಜಾಗೃತಿ ಮೂಡತೊಡಗಿದಂತೆ — ಪಿ. ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಚಂದ್ರಶೇಖರ್ ಪಾಟೀಲ್ ಮುಂತಾದವರು ಬರೆದದ್ದು ನವ್ಯದ ಬೌದ್ಧಿಕ ಕಸರತ್ತಾಗದೇ, ಸಾಹಿತ್ಯದಲ್ಲಿ ಹೊಸ ತಿರುವು ಕಂಡು ಬಂತು. ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಸಂದರ್ಭಗಳು ಪರಸ್ಪರ ಸಂಬಂಧವುಳ್ಳವು ಮತ್ತು ದೇಶದ ಕಲೆ–ಸಾಹಿತ್ಯಗಳ ಬಗೆಯನ್ನು ನಿರ್ಧರಿಸುವವು ಎಂಬ ಪ್ರಜ್ಞೆ ಮೂಡಿತು. ಸ್ವತಃ ಬದಲಾವಣೆಯನ್ನು ಬಯಸುತ್ತಿದ್ದ ವಾತಾವರಣಕ್ಕೊಂದು ನೆಪವಾಗಿ, ತೀವ್ರ ವೈಯಕ್ತಿಕತೆಯಲ್ಲಿ ಮಗ್ನರಾದ ನವ್ಯರ ಬಗ್ಗೆ ಅಸಮಾಧಾನದ ಬೆಳೆಯಿತು. ಮಹಾರಾಷ್ಟ್ರದಲ್ಲಿ ಜನಪ್ರಿಯವಾಗಿದ್ದ ದಲಿತ ಸಾಹಿತ್ಯ ಚಳುವಳಿ ಮತ್ತು ಆಂಧ್ರ ಪ್ರದೇಶದಲ್ಲಿದ್ದ ದಿಗಂಬರ ಕಾವ್ಯ ಕರ್ನಾಟಕವನ್ನು ಪ್ರಭಾವಿಸಿದವು. ಸಾಹಿತ್ಯ ಪರಿಷತ್ತು ನಡೆಸುತ್ತಿರುವ ಸಮ್ಮೇಳನದ ವಿರುದ್ಧ ಎದ್ದ ಅತೃಪ್ತಿಯ ಹೊಗೆಯೇ ಕಾರಣವಾಗಿ ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್ ಮುಂತಾದ ಎಡಪಂಥೀಯ ಮತ್ತು ಮಾನವೀಯ ಧೋರಣೆಗಳ ವೈಜ್ಞಾನಿಕ ತಳಹದಿಯ ಮೇಲೆ ೧೯೭೯ ರಲ್ಲಿ ಸಮ್ಮೇಳನದ ಮೂಲಕ ಸಂಘಟನಾತ್ಮಕವಾಗಿ ಬಂಡಾಯ ಸಾಹಿತ್ಯ ಚಳವಳಿ ತಲೆಯೆತ್ತಿತು. ಬರಗೂರು ರಾಮಚಂದ್ರಪ್ಪನವರು ಹೇಳುವಂತೆ—"ನಮ್ಮದು ಸ್ವಘೋಷಿತ ನಿಲುವುಗಳ ಅಸಾಹಿತ್ಯಿಕ ಕಲ್ಪನೆಯಲ್ಲ. ಆಳವಾದ ರಾಜಕೀಯ ಪ್ರಜ್ಞೆಯಿಂದ ಅಸಮಾನತೆಯ ಅಸಹ್ಯ ಅನುಭವದಿಂದ ಸಾಮಾಜಿಕ ಜವಾಬ್ದಾರಿಯ ಹಿನ್ನೆಲೆಯಲ್ಲಿ ಸ್ಫೋಟಗೊಂಡ ಚಿಂತನೆಯ ಅನಿವಾರ್ಯ ವಾಸ್ತವ"

ಸಾಹಿತ್ಯದಿಂದಲೇ ಕ್ರಾಂತಿ ಸಾಧ್ಯವಿಲ್ಲವಾದರೂ ಪೂರಕವಾದ ಜನಜಾಗೃತಿ ಸಾಧ್ಯ ಎಂಬ ಅರಿವನ್ನು ಹೊಂದಿರುವ; ಸಾಮಾಜಿಕ ವೈರುಧ್ಯಗಳ ವಿರುದ್ಧ ಸಾಹಿತಿ ಸಕ್ರಿಯವಾಗಿ ಭಾಗವಹಿಸಬೇಕು. ಆಂದೋಲನದಲ್ಲಿ ತೊಡಗಿಕೊಳ್ಳಬೇಕು ಎಂಬ ಧೋರಣೆಯ "ಬಂಡಾಯ ಸಾಹಿತ್ಯ" ಚಳುವಳಿಗೆ ಕೊಡುವ ಒತ್ತು ಮಹತ್ವಪೂರ್ಣವಾದುದು. "ಪ್ರಗತಿಶೀಲರಿಗಿಂತ ಬಂಡಾಯ ಸಾಹಿತ್ಯ ಭಿನ್ನವಾಗುವುದು ಸಂಪ್ರದಾಯದ ಆಮೂಲಾಗ್ರ ನಿರಾಕರಣೆಯಲ್ಲಿ ಮತ್ತು ಹೊಸ ನಿರ್ಮಾಣದ ಕ್ರಿಯಾಶೀಲತೆಯಲ್ಲಿ"– ಎಂಬ ಡಿ. ಆರ್. ನಾಗರಾಜ್ ಅವರ ಅಭಿಪ್ರಾಯ ಒಪ್ಪತಕ್ಕದ್ದು.

ವಚನ ಸಾಹಿತ್ಯದಂತೆಯೇ ಬಂಡಾಯ ಸಾಹಿತ್ಯ ಶೋಷಿತರ, ದಲಿತರ ಮುಖವಾಣಿಯಾಗಿ ಅವರದೇ ನೋವು, ರೋಷ ರೊಚ್ಚುಗಳೊಂದಿಗೆ ಹುಟ್ಟಿಬಂದಿದೆ. "ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಶತಮಾನಗಳಿಂದ ಅಪಮಾನಕ್ಕೆ ಕ್ರೌರ್ಯಕ್ಕೆ ಬಲಿಯಾದ ದಲಿತ ಪ್ರಜ್ಞಾವಂತ ಲೇಖಕ ಬರೆದ ಪ್ರತಿಭಟನಾ ಸಾಹಿತ್ಯವೇ ಅಥೆಂಟಿಕ್ ಆದ ದಲಿತ ಸಾಹಿತ್ಯ" ಎನಿಸಿಕೊಂಡಿದ್ದರೂ ದಲಿತವು ಬಂಡಾಯದ ಪ್ರತಿಭಟನಾತ್ಮಕ ವೇದಿಕೆಯಲ್ಲಿ ಒಂದುಗೂಡುತ್ತದೆ.

ಹೀಗೆ ಚಾರಿತ್ರಿಕ ಮತ್ತು ಸಮಕಾಲೀನ ಅನಿವಾರ್ಯತೆಯಲ್ಲಿ ಜನ್ಮವೆತ್ತಿದ ಬಂಡಾಯ ಸಂದರ್ಭದಲ್ಲಿ ಸ್ತ್ರೀ ಸಂವೇದನೆಗಳಿಗೆ ಹೆಚ್ಚಿನ ಮೌಲಿಕತೆ– ಪ್ರಾಮಾಣಿಕತೆ ಒದಗಿತು. ಕನ್ನಡಕ್ಕೆ ಮುಸ್ಲಿಂ, ಲಂಬಾಣಿ, ದಲಿತ ಸಂಸ್ಕೃತಿಯ ಸಂವೇದನೆಗಳನ್ನು ಮೊದಲ ಬಾರಿಗೆ ಎರಕ ಹೊಯ್ದು ಜನಪರ ಸಂಸ್ಕೃತಿಯ ಹುಟ್ಟಿಗೆ ಯತ್ನಿಸುತ್ತಿರುವ ಬಂಡಾಯ ಮಹಿಳೆಯ ಮನಸ್ಸಿಗೆ ಹೊಸ ಗಾಳಿ ಬೆಳಕನ್ನು ಮುಟ್ಟಿಸಿತು. ಬಂಡಾಯದ ಸಂದರ್ಭ ಮಹಿಳೆಗೆ ವ್ಯಕ್ತಿ ಗೌರವವನ್ನೂ, ಶೋಷಿತಳು ಎಂಬ ಎಚ್ಚರವನ್ನೂ ತಂದುಕೊಟ್ಟಿತು.

ಜೊತೆಗೆ ಈ ವೇಳೆಗಾಗಲೇ ಮಹಿಳೆಯ ಸಾಮಾಜಿಕ ಬದುಕಿನಲ್ಲಿ ಹಲವಾರು ಸ್ಥಿತ್ಯಂತರಗಳಾಗಿದ್ದವು. ಸ್ತ್ರೀ ಶಿಕ್ಷಣದಿಂದ ಉಂಟಾದ ಮಾನಸಿಕ ವಿಕಾಸ ಆರ್ಥಿಕತೆಯಿಂದಾಗಿ, ದುಡಿಯಲು ಹೊರಗೆ ಅಡಿಯಿಟ್ಟ ಮಹಿಳೆಯಲ್ಲಿ ಹೊರ ಪ್ರಪಂಚದ ಅರಿವು ಮೂಡಿತು, ಅನುಭವದ ವ್ಯಾಪ್ತಿ ಹೆಚ್ಚಿತು. ವೃತ್ತಿಪರ ಮನೋಭಾವ ಆರ್ಥಿಕ ಸ್ವಾತಂತ್ರ್ಯಗಳು ಸಮಾಜದ ರೂಪವನ್ನು ಬದಲಿಸತೊಡಗಿದವು. ಹೆಣ್ಣನ್ನು ಸಂಗಾತಿಯಾಗಿ ಕಂಡು, ಒಂದು ಆರೋಗ್ಯ ಪೂರ್ಣವಾದ ವಾತಾವರಣವನ್ನು ಸೃಜಿಸಿದ್ದಲ್ಲದೇ ಬಂಡಾಯ ಸಂದರ್ಭ ದಲಿತರಲ್ಲಿ ಶೋಷಿತ ಪ್ರಜ್ಞೆ ಮೂಡಿಸಿದಂತೆ ಮಹಿಳೆಯರಿಗೂ ಎಚ್ಚರ ಮೊಳೆಯಿಸುವತ್ತ ಶ್ರಮಿಸಿ ಸ್ತ್ರೀ ಸಂವೇದನೆಯ ಹೊಸ ಸ್ಪರ್ಶಕ್ಕೆ [illegible] ನಿರ್ಮಿಸಿತು. ಬಂಡಾಯ ಸಂದರ್ಭ ಮಹಿಳೆ ತನ್ನ ವ್ಯಕ್ತಿಗತ ನೆಲೆಯಲ್ಲಿ ನಿಂತೂ ವೈಯಕ್ತಿಕ ವಿವೇಚನೆಯಲ್ಲೂ ಸಾಮೂಹಿಕವಾಗಿ ಪ್ರತಿನಿಧಿಯಾಗುವ ಅವಕಾಶ ಕೊಟ್ಟಿದ್ದರಿಂದ ಇದು ಮುಕ್ತ ಅಭಿವ್ಯಕ್ತಿಗೆ

ಶಿಮವು ಮೂಡಿಕೊಟ್ಟಿತು.

"..........ಇತ್ತೀಚೆಗೆ ಮುಖ್ಯವಾಗಿ ಕಾವ್ಯದಲ್ಲಿ.... ಹಳೆಯ ಸತ್ತ ಆಚಾರ ವಿಚಾರಗಳ ಬಗ್ಗೆ 'ಸ್ವಾತಂತ್ರ್ಯವಿಲ್ಲದವಳು ಹೆಣ್ಣು- ಎಂಬ ವಿಚಾರಗಳನ್ನು ಪ್ರತಿಭಟಿಸುತ್ತಿದ್ದಾರೆ" ಎಂದು ಚ. ಸರ್ವಮಂಗಳಾ ಅವರೂ, "ಇನ್ನು ಮುಂದೆ ಕನ್ನಡದಲ್ಲಿ ಮಹಿಳೆಯರು ರಚಿಸುವ ಸಾಹಿತ್ಯಕ್ಕೆ ಹೆಚ್ಚಿನ ವೈಚಾರಿಕ ಮೌಲ್ಯ ಪ್ರಾಪ್ತವಾದೀತೆಂದು ಭರವಸೆ ಹುಟ್ಟಿಸುತ್ತಿದ್ದಾರೆ." ಎಂದು ವೀಣಾ ಶಾಂತೇಶ್ವರವರೂ ಅಭಿಪ್ರಾಯಿಸುವುದು ಈ ಸಂದರ್ಭದ ಮಹಿಳಾ -ಜಾಗೃತಿಯನ್ನೇ ಸೂಚಿಸುತ್ತದೆ. ಡಾ. ಜಿ. ಎಸ್. ಶಿವರುದ್ರಪ್ಪನವರಂತೂ—" ಈ ಎಚ್ಚರಕ್ಕೆ ಒಂದು ಹೊಸ ಆಯಾಮ ಪ್ರಾಪ್ತವಾದದ್ದು ಹೊಸಗನ್ನಡದ ಮೊದಲೆರಡು ಸಾಹಿತ್ಯಿಕ ಚಳುವಳಿಗಳ ನಂತರ ಕಾಣಿಸಿಕೊಂಡ ದಲಿತ–ಬಂಡಾಯ ಚಳುವಳಿಯ ಕಾರಣದಿಂದಲೇ ಎಂದು ನನ್ನ ಅನಿಸಿಕೆ "–ಎಂದು ಸ್ಪಷ್ಟವಾಗಿಯೇ ಹೇಳುತ್ತಾರೆ.

ನಿರ್ಲಕ್ಷಿತ ಶೋಷಿತ ಸ್ತರವೊಂದು ತನ್ನ ಸಂವೇದನಗಳ ಅಭಿವ್ಯಕ್ತಿಗೆ ತೊಡಗಿದಂತೆಲ್ಲ – ತನ್ನನ್ನು ತುಳಿತಕ್ಕೊಳಪಡಿಸಿದ ಮೌಲ್ಯಗಳನ್ನು ಪ್ರಶ್ನಿಸುವುದು ಧಿಕ್ಕರಿಸುವುದು. ಕಾರಣಗಳನ್ನು ಕಂಡು ಹಿಡಿದು ಆರೋಗ್ಯಕರ ಬದುಕಿನ ಹಂಬಲವನ್ನು ವ್ಯಕ್ತಪಡಿಸುವುದು, ತನ್ನತನದ ಸ್ವ ವ್ಯಕ್ತಿತ್ವ ಸ್ಥಾಪನೆಗಾಗಿ ಯತ್ನಿಸುವುದು ಸಹಜ ಎಂಬಂತೆ ನಡೆಯಿತು.

ಕೇವಲ ಪ್ರತಿಭಟನೆ ಮಾತ್ರವಲ್ಲದೇ ಮುಕ್ತವಾಗಿ ತನ್ನ ಸುತ್ತು ಮುತ್ತಲ ಪರಿಸರದ ಪ್ರತಿಸ್ಪಂದನ ಕಾವ್ಯವಾಗತೊಡಗಿತು. ತನ್ನ ವೈಯಕ್ತಿಕ ಕಾಮ-ಪ್ರೇಮದ ಅನುಭವದ ಅಭಿವ್ಯಕ್ತಿಯಲ್ಲೂ ಸಂಕೋಚದ ಚಿಪ್ಪನ್ನು ಒಡೆದು ತನ್ನೊಳಗನ್ನು ಬಿಚ್ಚಿಡಲಾಯ್ತು. ಕಾವ್ಯ ಸಂದರ್ಭಕ್ಕೆ ಹೊಚ್ಚ ಹೊಸದಾದಂತಹ ಮಹಿಳಾ ಮನಸ್ಸಿನ ಸ್ಪಂದನ ಮೂಡಿಬಂತು. ತನ್ನ ಪರಿಸ್ಥಿತಿ ಮತ್ತು ಸ್ಥಾಪಿತ ಮೌಲ್ಯಗಳು ತನ್ನ ವಿಕಾಸಕ್ಕೆ ಅಡಿಯಾಗಿವೆ ಎಂಬ ಎಚ್ಚರದಲ್ಲೂ, ಕೇವಲ ಅಬ್ಬರದ ಪ್ರತಿಭಟನೆಯಲ್ಲೇ ಮುಳುಗದೇ ತನ ಸಂವೇದನೆಯ ಒಟ್ಟು ಮುಖಗಳನು ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯಕ್ಕೆ ದಾಖಲಿಸಲಾಯ್ತು.

ಅನುಬಂಧ (ಅಡಿ ಟಿಪ್ಪಣಿ)


೧. ಪೋಲಂಕಿ ರಾಮಮೂರ್ತಿ — "ಸಂಕ್ರಮಣ" ೨೩-೧೯೪ ಪುಟ ೨೫-೨೬.

೨. ಜೇಡರ ದಾಸಿಮಯ್ಯ — "ಸಾಮಾನ್ಯರಿಗೆ ಸಾಹಿತ್ಯ ಚರಿತ್ರೆ" ಬೆಂ. ವಿ. ವಿ, ಸಂ-೫ ಪುಟ-೬೦

೩. ಸಂ: ಆರ್. ಸಿ. ಹಿರೇಮಠ — "ಇಪ್ಪತ್ತೇಳು ಶಿವಶರಣೆಯರ ವಚನಗಳು" ಕ. ವಿ. ವಿ. ಪುಟ-೮೯

೪. ಅದೇ ಪುಟ-೧೦೧

೫. ಸಂಚಿ ಹೊನ್ನಮ್ಮ — "ಹದಿಬದೆಯ ಧರ್ಮ" ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೫-೬

೬. ಅದೇ ೫-೮

೭. ಅದೇ ೩-೩೫

೮. ಅದೇ ೪-೩೩

೯. ಸಿ. ವೀರಣ್ಣ — "ಕನ್ನಡ ಪ್ರತಿಭಟನಾ ಕಾವ್ಯ" — ಪ್ರಸ್ತಾವನೆ.

೧೦. ದಿವಾನ್ ರಂಗಾಚಾರ್ಲು - ವಿ. ಶ್ರೀ. ಚಂದ್ರಶೇಖರ್, -ಸಮಾಚಾರ ಮತ್ತು ಪ್ರಸಾರ ಸಚಿವಾಲಯ ಬೆಂ. ೧೯೭೫ ಪುಟ ೧೪೬

೧೧. ವಿಜಯಾ ದಬ್ಬೆ — "ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ" ಪುಟ ೧೯೫

೧೨. ಆರತಿ, ಮನೋಹರ ಗ್ರಂಥ ಭಂಡಾರ ಧಾರವಾಡ.

೧೩. ಸಂ: ನೇಮಿಚಂದ್ರ — ಬೆಳಗೆರೆ ಜಾನಕಮ್ಮ, ಬದುಕು ಬರಹ ಕರ್ನಾಟಕ ಲೇಖಕಿಯರ ಸಂಘ ಬೆಂಗಳೂರು ೧೯೮೮ ಪುಟ ೭೭

೧೪. ಅದೇ ಪುಟ ೮೧

೧೫. ಬರಗೂರು ರಾಮಚಂದ್ರಪ್ಪ — ಬಂಡಾಯ ಸಾಹಿತ್ಯ ಚಳುವಳಿ ೧೯೮೧ ಪುಟ ೯

೧೬. ಗಂಗಾಧರ ಮೊದಲಿಯಾರ್ "ಬಂಡಾಯ ಸಾಹಿತ್ಯದ ನೆಲೆಬೆಲೆ" ಪುಟ ೨೧

೧೭. ಮಹಿಳೆ ಮತ್ತು ಕನ್ನಡ ಸಾಹಿತ್ಯ — ಬೆಂ. ವಿ. ವಿ. ಪುಟ ೮೬

೧೮. ಅದೇ ಪುಟ ೫೨

೧೯. ಜಿ. ಎಸ್. ಎಸ್. — ಶಕುಂತಲೋಪಾಖ್ಯಾನ — ಮುನ್ನುಡಿ ಕಲ್ಯಾಣ ಪ್ರಕಾಶನ ಬೆಂ. ೧೯೮೮

ವಿನಯಾ ನಾಯಕ್.

---

## ಅಪರಾಧ?

ಇಲ್ಲಿ
ಅಪರಾಧ
ನಿರಪರಾಧಗಳ ನಡುವೆ
ಒಂದಕ್ಷರದ ವ್ಯತ್ಯಾಸ
ಸತ್ಯ ನಿಶ್ಯಬ್ದ
ಮಾತಿಲ್ಲದ ಮಹಾಮೌನ

ಹಣ–
ಜೊಲ್ಲು ಸುರಿಸಿ ತುಟಿ ಸವರಿದೆ
ಕಪ್ಪು ಕತ್ತಲೆ, ಕೊರೆವ ನೆಲ
ಕರುಳೆಲ್ಲಾ ನಡುಗಿದೆ
ಒಡಲೊಳಗೆ ಸಂಕಟ ಕಿವುಚಿದೆ

ಬಚ್ಚಿಟ್ಟು ಕಾದದ್ದು
ಬಟಾಬಯಲು
ಕವುಚಿಮುಚ್ಚಬೇಕು
ಈ ನ್ಯಾಯಾ
ಕೆಂಪುದೀಪ
ಕೊಳೆಸೆಲ್ಲಾ ಕಳೆದಾಗಿದೆ
ಮುಂಡೆ, ರಂಡೆ, ತೂತು...
ಕವಿತಗುಳು
ಎದೆಯೊಳಗೆ ಇಳಿಯಲು
ಒಡ್ಡಾಟ
ಬಿಚ್ಚು ಮನ
ಯೋನಿ ಕೀವು
ಕಿಬ್ಬೊಟ್ಟೆ ಕಿಲುಬು
ಮೊಲೆ ಹಾಲು ಬೆಳ್ಳಗೆ
ಮಡಿಲಲ್ಲಿ ನಗೆಮಲ್ಲಿಗೆ
ಮುಂದೆ ಇದ್ದದ್ದೆ
ಕೀವು, ನಾಶನೆ

ಮೀಸೆಗಳು ಕುಣಿದಿವೆ
ಮೈ ನೀಲಿಗಟ್ಟಿ
ಕೆಂಪು ಸುರಿದರೆ
ಲಾಠಿಗಳ ನಲಿದಾಟ
ಹಿಡಿದ ಕೈ ಗುಂಡಿನದಲ್ಲಿ
ಹೆಣ್ಣನದೂ ಅಲ್ಲ
ಎಲ್ಲಾ ಸಮಾನರು:
ಕವಚ ಧರಿಸಿದರೆ
ಎದೆ ನಡುಗಿಸುವ ನೋಟ
ಕಣ್ಣಿಗೊಂದು ಹೆಮ್ಮೆ
ನಕ್ಷತ್ರಗಳ ಮಿನುಗಾಟ
ಎದೆಯ ಮೇಲೆ

ಕಪ್ಪು ಬರಲು ಬೆಳೆ–ಬೆಳೆದು
ಗುಡಿಸಿದೆ ಸತ್ಯವ
ಉರಿ ಹಚ್ಚಿ ಕುಣಿದಿದೆ
ಕರಾಳ ಕೈ
ಎಲ್ಲಾ ಬರೀ ಬೂದಿ
ಅಲ್ಲೊಮ್ಮೆ ಚಿಗುರನೆ?
ಮಹಾಮೌನಿ ಇಲ್ಲ
ಗೂಡು ಕಟ್ಟಿ
ಕಂಬಳಿ ಹುಳವಾಗಬಹುದೆ?
ಬಣ್ಣದ ಚಿಟ್ಟೆಯಾಗುವ
ಕನಸಲಿ!

ಸರಸ್ವತಿ. ದು.

---

## ಓದುಗರಲ್ಲಿ ಮನವಿ

ಗಗನಕ್ಕೇರುತ್ತಿರುವ ಮುದ್ರಣ ಕಾಗದದ ಬೆಲೆ, ಅಂಚೆ ವೆಚ್ಚ ಮುಂತಾದವುಗಳಿಂದಾಗಿ ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾಗಿದೆ. ಮಾನಸಕ್ಕೆ ಆಸಕ್ತಿ ಹಾಗೂ ಪ್ರೋತ್ಸಾಹ ವ್ಯಕ್ತಪಡಿಸಿ ಪತ್ರ ಬರೆಯುವ ಸಹೃದಯರು ಹಾಗೂ ಚಂಧಾ ಮುಗಿದಿರುವ ಓದುಗರು ತಕ್ಷಣ ಚಂದಾ ಹಣ ಕಳಿಸಿದರೆ ಪತ್ರಿಕೆಯನ್ನು ಉಳಿಸಿ ಬೆಳೆಸಲು ನೀರೆರೆದು ಪ್ರೋತ್ಸಾಹಿಸಿದಂತಾಗುತ್ತದೆ. ಓದುಗರೆಲ್ಲರನ್ನು ಉಳಿಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆಯಾದರೂ ಉಚಿತವಾಗಿ ಒಂದು ಸಂಚಿಕೆಯನ್ನು ಕಳಿಸಲು ಉಂಟಾಗುವ ಖರ್ಚನ್ನು ಭರಿಸುವುದು ಪತ್ರಿಕೆಗೆ ಹೊರೆಯಾಗುತ್ತದೆ. ಪ್ರಿಯ ಓದುಗರು ಸಹಕರಿಸಿ ತಕ್ಷಣ 20-00 ರೂ ಚಂದಾ ಹಣ ಕಳಿಸಿಕೊಡಬೇಕೆಂದು ಕೋರುತ್ತೇವೆ.

ಸಂ ಮಂ.

# ಮಹಿಳೆಯರ ದೃಷ್ಟಿಯಲ್ಲಿ ಉದ್ಯೋಗಸ್ಥ ಮಹಿಳೆ

ಉದ್ಯೋಗಸ್ಥ ಮಹಿಳೆ ಎಂದಾಕ್ಷಣ "ಬೀದಿ ಸುತ್ತಲಿಕ್ಕೆ ಹೋಗುವವಳು" ಎಂದು ಹೇಳುವುದನ್ನು ಕೇಳಿದ್ದೀರಾ? ಈ ಮಾತು ಸೂಕ್ಷ್ಮಮತಿಗಳನ್ನು ಆಘಾತ ಕ್ಕೀಡು ಮಾಡುವುದಂತೂ ಸಹಜ. ಆದರೆ ಏನು ಮಾಡೋದು? ಕಾಲ ಬದಲಾಗಿದ್ದರೂ ಜನರ ಮನೋಭಾವ ಬದಲಾಗಲಿಲ್ಲ. ಮಹಿಳೆಯರಿಂದಲೇ ಇಂತಹ ಮಾತನ್ನ ಕೇಳಬೇಕಾಗಿರೋದು ವಿಷಾದಕರ.

ಕಚೇರಿ ಮುಗಿಸಿ ಬರುತ್ತಿದ್ದ ಲೀಲಾ ನೂಕು ನುಗ್ಗಲಿನಲ್ಲಿ ಬಸ್ಸು ಹತ್ತಿ ಖಾಲಿ ಇದ್ದ ಸೀಟ್‌ಗೆ ಬ್ಯಾಗ್ ಹಾಕಿದ್ದನ್ನು ಸರಿಸಿ ಕುಳಿತುಕೊಂಡಾಗ ಮಹಿಳೆಯಿಂದ ಬಂದ ಪ್ರತಿಕ್ರಿಯೆಯ ಬಗ್ಗೆ ತಿಳಿಸಿದ್ದರು. ಅದು ಹೀಗಿದೆ "ಏಳ್ರಿ! ಬ್ಯಾಗ್ ಮಡಗಿದ್ದು ನಮ್ಮ ಸೀಟು" ಎಂದು ಜೋರು ಮಾಡಿದ್ರಂತೆ. ಆಗ "ಇದೇನು ಊರ ಬಸ್ ಅಲ್ಲ, ಸಿಟಿ ಬಸ್. ೧೫ ನಿಮಿಷದ ಪ್ರಯಾಣವಷ್ಟೆ. ಮುದುಕಿಗೆಂತ ಒಂದು ಸೀಟು ಬಿಟ್ಟು ಕೊಟ್ಟಿದ್ದೇನಷ್ಟೆ" ಎಂದು ಉತ್ತರಿಸಿದರಂತೆ. "ಒಂದೊಂದು ದಿನ ಬಸ್‌ನಲ್ಲಿ ಪ್ರಯಾಣ ಮಾಡುವವರಿಗೆ ದಿನಾ ಓಡಾಡುವವರ ಕಷ್ಟ ಗೊತ್ತಾಗೋದೇ ಇಲ್ಲ. ನಾವಾದ್ರೂ ಹೇಗಿರಬೇಕು? ಎಂದು ಪ್ರಶ್ನಿಸಿದ್ದಕ್ಕೆ "ನಮ್ಮ ಮನಗೋಳಲ್ಲಿ ಬೀದಿ ಸುತ್ತಲಿಕ್ಕೆ ಕಳಿಸೋಲ್ಲ. ಮರ್ಯಾದೆಯಿಂದ ಮನೇಲಿರಬೇಕು, ಹೊರ್ಗೋದಿದ್ರೆ ಬೇಟೆಪ್ಪಗೆ ಕಳುಹಿಸುತ್ತಾರಷ್ಟೆ" ಎಂದು ಜೋರಾಗಿ ವ್ಯಂಗವಾಗಿ ಬಾಯಿ ಮಾಡಿದಳಂತೆ, "ಇನ್ನು ಆಕೆಯತ್ರ ಮಾತಾಡಿದ್ರೆ ನಮ್ಮ ಮುಖಕ್ಕೆ ಮಂಗಳಾಷ್ಟಕ" ಎಂದು ಬಗೆದು ಸುಮ್ಮನಾದೆ ಎಂದರು. ಕಾಲ ಬದಲಾಗಿರುವ ಪರಿವೆ ಇಲ್ಲದ ಜನ ಹೀಗೆ ಮಾತಾಡ್ತಾರೆ, ಸಾಲದಕ್ಕೆ ಅನಕ್ಷರಸ್ಥರು ಎಂದುಕೊಂಡು ಅವರ ಮಾತನ್ನ ಉಪೇಕ್ಷಿಸುವಂತಿಲ್ಲ. ವ್ಯವಹಾರ ಜ್ಞಾನ ಅವರಿಗೆ ಚೆನ್ನಾಗಿದೆಯಲ್ಲಾ! ಅವರೇ ಈ ರೀತಿ ಕ್ಷುಲ್ಲಕವಾಗಿ ಮತ್ತೊಬ್ಬ ಮಹಿಳೆಯ ಕರ್ತವ್ಯವನ್ನು ಹೀನಾಯವಾಗಿ ಕಾಣುವುದು ಸರಿಯೆ? ಕೂಲಿ ಮಾಡಿ ಹೊಟ್ಟೆ ಹೊರೆಯುವ ಮಹಿಳೆಯರು ಇಂತಹ ಮಾತುಗಳಿಗೆಲ್ಲಾ ಒಗ್ಗಿ ಹೋಗಿದ್ದಾರೆ. ವಿದ್ಯಾವಂತರಿಗೆ ಇದು ಅಸಹನೀಯ. ಎಲ್ಲಾ ತರಹದ ಜನರನ್ನು ಎದುರಿಸಲು ಮಾನಸಿಕವಾಗಿ ಸಿದ್ಧರಿರಬೇಕಷ್ಟೆ.

ಬಹಳ ಕಷ್ಟಪಟ್ಟು ಒಂದು ಸ್ಥಿತಿಗೆ ಬಂದಿದ್ದರೂ ಎಷ್ಟೋ ವೇಳೆ ತಾವು ದಾಟಿ ಬಂದ ವಿವಿಧ ಮಜಲುಗಳನ್ನು ಮರೆತು ಬಿಡುತ್ತಾರೆ. ಬಹಳ ಮಂದಿ ಇದಕ್ಕೆ ಹೊರತಾಗಿರುವವರಿಲ್ಲ. ನಾಗ ಒಬ್ಬಾಕೆ ತನ್ನ ಕಾಲ ಮೇಲೆ ತಾನು ನಿಲ್ಲಬೇಕು, ಇತರರಿಗೆ ಹೊರೆಯಾಗಬಾರದು ಎಂಬ ನಿಲುವು ಆಕೆಯದು. ಸಿಕ್ಕಿದ ಸಣ್ಣ ಪುಟ್ಟ ಉದ್ಯೋಗವನ್ನು ಕಡೆಗಣಿಸಿರಲಿಲ್ಲ. ಒಳ್ಳೆಯ ಕೆಲಸಕ್ಕಾಗಿ ಪರದಾಡುತ್ತಿದ್ದಳು. ಆಗೆಲ್ಲಾ ಬೆನ್ನು ತಟ್ಟಿ ಉತ್ತೇಜಿಸುತ್ತಿದ್ದರು, ಆಕೆಯ ಸ್ನೇಹಿತರು ಹೀಗಿರಲು ಆಕೆಗೆ ವಿವಾಹ ಸನ್ನಿವೇಶ ಸನ್ನಿಕರ್ಷವಾದುದೇ ತಡ, "ಕೆಲಸ ಮಾಡಿ ಏನ್ಮಾಡಬೇಕು? ಹೇಗೂ ಪತಿರಾಯರಿಗೆ ಸರ್ಕಾರಿ ಕೆಲಸವಿದೆಯಲ್ಲಾ ನಾವೆಲ್ಲಾ ಒಬ್ಬರ ಸಂಬಳದಲ್ಲೇ ಜೀವನಾ ಮಾಡ್ತಾ ಇಲ್ವಾ" ಎಂದು ಬೋಧನೆ ಮಾಡಲಿಕ್ಕೆ ಪ್ರಾರಂಭಿಸಿದರು. "ಕೆಲಸ ಕೆಲಸ ಅಂತ ಒದ್ದಾಡೋದು ಯಾಕೆ! ಮನೆ ಕೆಲಸ ಮಾಡ್ಕೊಂಡು ಹಾಯಾಗಿರೋದು ಬಿಟ್ಟು ಸಂಪಾದನೆ ಮಾಡ್ಲೇಬೇಕೂಂತ ರೂಲ್ಸ್ ಇಲ್ವಲ್ಲಾ!" ಎಂದು ಸಮಾಧಾನ ಹೇಳಿದ ಸ್ನೇಹಿತರಲ್ಲಿ ಚಂದ್ರಿಕಾ ಮೊದಲಿಗಳು, ತನ್ನ ತಂದೆ ತಾಯಿ ಚಿಕ್ಕಂದಿನಿಂದಲೂ ಮಕ್ಕಳನ್ನು ಸಾಕಲು ಕಷ್ಟಪಟ್ಟದ್ದು ಗೊತ್ತಿದ್ದರೂ ಚಂದ್ರಿಕಾಗೆ ಹೆಣ್ಣು ವಿದ್ಯಾವಂತಳಾಗಿದ್ದರೂ ಮತ್ತೊಬ್ಬರ ಆಶ್ರಯದಲ್ಲಿರುವುದೇ ಸರಿ ಎಂಬ ಧೋರಣೆಯಲ್ಲಿ ನಂಬಿಕೆ. ಸ್ವಾವಲಂಬಿ ತತ್ವಕ್ಕೆ ಬದ್ಧರಾಗಿರಬೇಕೆಂಬ ಹಂಬಲವುಳ್ಳವರಿಗೆ ಇಂತಹವರ ಮಾರ್ಗದರ್ಶನ ಸರಿ ಬರಲಾರದು. ಇಲ್ಲಿ ಗಮನಿಸಬೇಕಾದುದಿಷ್ಟೆ. ವಿವಾಹವಾಗುವವರೆಗೆ ನೌಕರಿ ಮಾಡಬಹುದು ನಂತರ ಉದ್ಯೋಗವನ್ನರಸುವ ಪ್ರವೃತ್ತಿಯನ್ನು ಕೈ ಬಿಡಬೇಕು, ಹೇಗೂ ಜೀವನಕ್ಕೆ ಸುರಕ್ಷಿತತೆ ಇದೆಯಲ್ಲಾ! ಮಹಿಳೆಯರಲ್ಲೇ ಇಂತಹ ಮನೋ ಧರ್ಮ ಕಂಡು ಬರುತ್ತಿದೆಯಲ್ಲಾ! ಇದರ ಬಗ್ಗೆ ಮಹಿಳೆಯರೇ ಗಂಭೀರವಾಗಿ ಚಿಂತಿಸಬೇಕಾಗಿದೆ,

ಇನ್ನು ಲಿಪ್‌ಸ್ಟಿಕ್, ತೋಳಿಲ್ಲದ ರವಿಕೆ ಹಾಕು

ವುದರ ಮೂಲಕ ತಾವು ಆಧುನಿಕರೆಂದು ತೋರಿಸಿಕೊಳ್ಳುವ ಮಹಿಳೆಯರು ಒಂದೆಡೆಯಾದರೆ, ಪಾಶ್ಚಾತ್ಯ ವಿಚಾರ ಧಾರೆಗಳಿಗೆ ಮಾರುಹೋಗಿ ವಿಚಾರವಂತರೆಂದು ಹೇಳಿಕೊಳ್ಳಲು ಇಚ್ಛೆಪಡುವ ಮಹಿಳೆಯರು ಮತ್ತೊಂದೆಡೆ ಕಂಡು ಬರುತ್ತಾರೆ. ಪಾಶ್ಚಾತ್ಯರಲ್ಲಿರುವ ವೃತ್ತಿಗೌರವ, ದೇಶಪ್ರೇಮ, ಆರ್ಥಿಕ ಸ್ವಾತಂತ್ರ್ಯ ಇತ್ಯಾದಿಗಳಿಂದ ಪ್ರಭಾವಿತರಾಗದೆ ಕೇವಲ ಅವರ ವೇಷಭೂಷಣ, ದುಶ್ಚಟಗಳನ್ನು ಅನುಕರಣೆ ಮಾಡಲು ಆಸಕ್ತಿ ವಹಿಸುತ್ತಿದ್ದಾರಷ್ಟೆ. ಹೆಣ್ಣು ನೌಕರಿ ಮಾಡುವ ಬಗ್ಗೆ ಅಭಿಪ್ರಾಯ ಕೇಳಿದರೆ, ಕೇವಲ "ಬೋರಡಮ್‌ಗಾಗಿ" ಎಂದೆ ಉತ್ತರಿಸುತ್ತಾರಷ್ಟೆ. ಇಲ್ಲಿಯೂ ಸ್ವತಂತ್ರವಾಗಿ ಆಲೋಚಿಸಿ ಉತ್ತರಿಸುವ ಸೌಜನ್ಯ ತೋರಿಸುವುದಿಲ್ಲ. "ಮನೆಯಲ್ಲಿ ಗತಿ ಇಲ್ಲದವರು ಉದ್ಯೋಗಕ್ಕೆ ಹೋಗುತ್ತಾರೆ" ಎಂಬ ಮನೋಭಾವ ಇವರದು. ಬಾಹ್ಯಾಡಂಬರಕ್ಕೇ ಆದ್ಯತೆ ನೀಡಿದ್ದಾರಷ್ಟೆ.

ಉದ್ಯೋಗಸ್ಥ ಮಹಿಳೆಯರು ಅದರಲ್ಲೂ ಸಂಘಟಿತ ಕ್ಷೇತ್ರದಲ್ಲಿರುವವರು ಪುರುಷರಷ್ಟೆ ನಿರ್ದಿಷ್ಟ ವರಮಾನ ಪಡೆಯುತ್ತಿದ್ದು ಸಮಾಜದಲ್ಲಿ ಸ್ಥಾನಮಾನ ಗಳಿಸಿದ್ದಾರೆ. ಗೃಹಕೃತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು ಪ್ರತಿಯೊಂದಕ್ಕೂ ಮತ್ತೊಬ್ಬರ ಮುಂದೆ ಕೈಯೊಡ್ಡುವ ಪರಿಸ್ಥಿತಿಯಲ್ಲಿರುವ ಮಹಿಳೆಯರ ಅಸಹನೆ ಕಟ್ಟೆಯೊಡೆದು ಹೊರಬಂದ ಪ್ರತಿಕ್ರಿಯೆಗಳಿಂದ ಉದ್ಯೋಗಸ್ಥರು ವಿಚಲಿತರಾಗುವ ಅಗತ್ಯವಿಲ್ಲ. ಸ್ವಾವಲಂಬಿಗಳಾಗಬೇಕೆಂಬ ಪ್ರಜ್ಞೆ ಅವರಲ್ಲೂ ಮೂಡುತ್ತಿರುವುದನ್ನು ಗಮನಿಸುತ್ತಿದ್ದೇವೆ ತಾನೆ! ಇದನ್ನು ಹೊರಗೆಡಹಿದಲ್ಲಿ ತಮ್ಮ ಪ್ರತಿಷ್ಠೆಗೆ ಕಡಿಮೆ ಎಂದು ಭಾವಿಸಿಕೊಂಡಿದ್ದಾರಷ್ಟೆ.

ಉದ್ಯೋಗಸ್ಥ ಮಹಿಳೆಯರು "ಹಾಲು ಕರೆಯುವ ಹಸು" (ಪ್ರತಿ ತಿಂಗಳು ಕೊಡುವ ಸಂಬಳ ವರದಕ್ಷಿಣೆಯಲ್ಲದೆ ಮತ್ತೇನು? ಎಂಬುದಕ್ಕೆ ಬಳಸುವ ಮತ್ತೊಂದು ಚಟು) "ಬೀದಿ ಬಸವಿ", "ಬಜಾರಿ" ಎಂಬ ಸಂಬೋಧನೆಗೆ ಒಳಗಾಗಿದ್ದಾರೆ. ಇದನ್ನು ಲೆಕ್ಕಿಸದೆ ಆರ್ಥಿಕ ಸ್ವಾತಂತ್ರ್ಯ ಮತ್ತು ಸ್ವಂತಿಕೆಗೆ ಒಡ್ಡಿರುವ ಸವಾಲುಗಳಿವು ಎಂದು ಪರಿಗಣಿಸುವುದು ಸೂಕ್ತ. ಇಲ್ಲಿ ಮಹಿಳೆಯರು ಪುರುಷರ ಹಿನ್ನಲೆಯಲ್ಲೇ ತಮ್ಮ ಧೋರಣೆಯನ್ನು ಬೆಳಸಿಕೊಂಡಿರುತ್ತಾರೆಂಬುದನ್ನು ನೆನಪಿನಲ್ಲಿಡಿ. ಅಂದ ಮಾತ್ರಕ್ಕೆ ಪುರುಷ ಸಮುದಾಯವನ್ನು ಪ್ರಸ್ತುತ ಸ್ಥಿತಿಯಲ್ಲೂ ಹೊಗಳುತ್ತಿದ್ದೇವೆಂದು ಭಾವಿಸಬಾರದು. ಎಷ್ಟೊ ಮಂದಿ ತಮ್ಮ ಆಲೋಚನಾ ಪ್ರವೃತ್ತಿಯನ್ನು ಹೊಸ ದಿಕ್ಕಿನಲ್ಲಿ ಹರಿಸುತ್ತಿದ್ದಾರೆ. ಇದು ಮತ್ತಷ್ಟು ಬಲವಾಗಲು ಉದ್ಯೋಗಸ್ಥ ಮಹಿಳೆಯರ ಮನೋಸ್ಥೈರ್ಯವೇ ಪ್ರಧಾನ ಪಾತ್ರವಹಿಸುತ್ತಿದೆಯೆಂಬುದರಲ್ಲಿ ಅತಿಶಯೋಕ್ತಿ ಇಲ್ಲ.

ಎಚ್. ಎಸ್. ಉಷಾರಾಣಿ.

# ಎರಡು ಹನಿಗಳು

ಹಾಳಾದ್ದು,
ಮನೆಗೆ ಈಗೀಗ
ಅನಪೇಕ್ಷಿತ ಎದೆನೋವು
ಡಾಕ್ಟರಲ್ಲಿಗೆ ಹೋಗಿ ಹೇಳಬೇಕು—
ಹುಚ್ಚುಚ್ಚು ಕನಸುಗಳಿಂದ ಭಾವನೆಗಳಿಂದ ತುಂಬಿ
ದುಮುಗುಡುವ ಈ ರಕ್ತ ಹಿಂಡಿ
ಎಲ್ಲಾದರೂ ಹಾಗಿದು ಬಿಡಿ
ಬಿತ್ತಿದಷ್ಟೂ ಬೆಳೆವ
ನನ್ನಂಥ
ಆ ಭೂಮಿಯ ತುಣುಕಿಗೆ
ಅಳುವುದಕ್ಕೆ ಕಣ್ಣಿಲ್ಲವೆಂದು
ಖಾತ್ರಿಮಾಡಿಕೊಳ್ಳಿ

ಮಾದ್ದುದ ನನ್ನ ಜಡೆ
ಎಲ್ಲೋ ಸಿಕ್ಕಿ 'ಜಲ್' ಎಂಬ ನೋವು
ಜಗ್ಗಿಕೊಂಡೆ
ಪಾಪದ್ದು,
ಎದೆಯ ಭಾರವನ್ನೆಲ್ಲ ತಾನೇ ಹೊತ್ತಂತೆ
ಇಳಿಬಿದ್ದಿತು.
ಉಗುರ ಸಂದಿಯಲಿ ಮೆತ್ತಿದ್ದ ಹಿಟ್ಟು ಕೆರೆಸ
ತೊಡಗಿದೆ.
ಹುಡುಗಿ, ಹೆಣ್ಣಾಗುವುದು ತಾಯಾಗುವುದು
ಎಂಥ ಒಜ್ಜೆ!

ವಿನಯಾ ನಾಯಕ್.

# ದಿ ಡಾರ್ಕ್ ಹೋಲ್ಡ್ಸ್ ನೋ ಟೆರರ್ಸ್

ಶಶಿ ದೇಶಪಾಂಡೆ

ಚಂಪಾವತಿ ಎಚ್. ಎಸ್.

---

ಇಂಗ್ಲೀಷ್ ಬರಹಗಾರ್ತಿ ಶಶಿ ದೇಶಪಾಂಡೆಯವರ ಹೆಸರು ಬಹುಶಃ ಕರ್ನಾಟಕದಲ್ಲಿ ಹೆಚ್ಚು ಪರಿಚಯವಾದುದು ಈಗ ಅವರು ಅವರ ಎರಡು ಕಾದಂಬರಿಗಳಿಗೆ ಪಡೆದಿರುವ ಕೇಂದ್ರ ಸಾಹಿತ್ಯ ಅಕ್ಯಾಡಮಿ ಹಾಗೂ 'ಶಾಶ್ವತಿ' ಪ್ರಶಸ್ತಿಗಳಿಂದ "ದಟ್ ಲಾಂಗ್ ಸೈಲೆನ್ಸ್" ಕೇಂದ್ರ ಅಕ್ಯಾಡಮಿ ಪ್ರಶಸ್ತಿ ಪಡೆದಿದ್ದರೆ, 'ದಿ ಡಾರ್ಕ್ ಹೋಲ್ಡ್ಸ್ ನೋ ಟೆರರ್ಸ್. "ಶಾಶ್ವತೀ" ಪ್ರಶಸ್ತಿ ಪಡೆದಿದೆ. ಮಹಿಳಾ ಹೋರಾಟಗಳೊಂದಿಗೆ, ಅಂತಹ ವ್ಯಕ್ತಿತ್ವಗಳೊಡನೆ ಆತ್ಮೀಯ ಸಂಬಂಧಗಳನ್ನು ಹೊಂದಿರುವ ಶಶಿ ದೇಶಪಾಂಡೆಯವರ ಆಧುನಿಕ ಮಹಿಳೆಯ ಮನದಲ್ಲಿರುವ ಘರ್ಷಣೆಯನ್ನು, ದ್ವಂದ್ವಗಳನ್ನು, ಗಂಡು-ಹೆಣ್ಣಿನ ಸಂಬಂಧಗಳು ಮತ್ತು ಅದರ ಆಯಾಮಗಳನ್ನು ಹಿಡಿದಿಡುವ ಬರವಣಿಗೆಯ ಒಳನೋಟದ ಸಾಮರ್ಥ್ಯಗಳು ಅದ್ಭುತ. ದಿ ಡಾರ್ಕ್ ಹೋಲ್ಡ್ಸ್ ನೋ ಟೆರರ್ಸ್ ಬಗ್ಗೆಗಿನ ಒಂದು ವಿಮರ್ಶಾತ್ಮಕ ಲೇಖನವನ್ನು ಇಲ್ಲಿ ಕೊಡಲಾಗಿದೆ.

---

"ದಿ ಡಾರ್ಕ್ ಹೋಲ್ಡ್ಸ್ ನೋ ಟೆರರ್ಸ್" ನ ನಾಯಕಿ ಸರಿತಾ ಸೂಕ್ಷ್ಮ ಸ್ವಭಾವದ ಹೆಣ್ಣು. ಕಾದಂಬರಿಯು ಪ್ರಾರಂಭವಾಗುವುದು ಕತ್ತಲಲ್ಲಿಚಾಚುವ ಕ್ರೂರ ಕೈಗಳ ಬಗ್ಗೆಗಿನ ಭಯದಲ್ಲಿ. ಈ ಕತ್ತಲ ಭಯಾನಕತೆಗೆ ತುಟಿಗಳಿವೆ, ಕಣ್ಣುಗಳಿವೆ, ಕೈಗಳಿವೆ ಹಲ್ಲುಗಳಿವೆ ಸರಿತಾಗೆ ತುಟಿಗಳ ಮೇಲೆ ರಕ್ತದ ರುಚಿ ಕಂಡುಬರುತ್ತಿವೆ.

ಈ ಕೈಗಳು ದೇಹವಾಗುತ್ತದೆ. ಸರಿತಾಳ ದೇಹದ ಮೇಲೆ ಈ ದೇಹ ಬೀಳುತ್ತದೆ ಆಕೆ ತ್ಯಜಿಸುತ್ತಾಳೆ ತ್ಯಜಿಸುವಿಕೆ ಆಕೆಯ ದಿನನಿತ್ಯದ ಭಾಗವಾಗಿದೆ. ಆಕೆಯ ಮುಖದ ಹತ್ತಿರದ ಮುಖ ಅಪರಿಚಿತನದು. ಭಾವನೆಗಳಿಲ್ಲದ ಕ್ರೂರ ಮುಖ. ಈಕೆ ನೋಡಿರದ ಒಬ್ಬ ಮನುಷ್ಯ.

ಈ ತರದ ಕತ್ತಲೆ ಹಿಡಿದಿರುವ ಭಯಾನಕತೆ ಮುಂದುವರಿಯುತ್ತಲೇ ಇರುತ್ತದೆ "ಬೇಡ. ಈಗ ಬೇಡ ನಿಲ್ಲಿಸಿ" ಅನ್ನುವ ಮಾತು ಮಾತ್ರ ಅವಳಬಾಯಿಂದ ಬರುತ್ತದೆ ಈ ಭಯಾನಕತೆ ಅವಳ ಕುತ್ತಿಗೆ ಹಿಡಿದಂತಾಗಿ ತಾನು ಸಾಯುತ್ತೇನೆ ಎಂಬ ಭಯ ಭೀತಿ ಉಂಟಾಗುತ್ತದೆ.

ಈ "ರೇಪ್" ನ ಕ್ರೂರತೆ ಆಕೆಗೆ ತಿಳಿದಿದೆ ಕುತ್ತಿಗೆ ಹಿಚುಕುವ ಸಾವಿನ ರೀತಿಯದ. ರಾಕ್ಷಸತ್ವದಿಂದ ಆಕೆಯ ದೇಹವನ್ನು ಆಕ್ರಮಿಸುವುದು, ಆಕೆ ಈಗ ಕೇವಲ ಒಂದು ವಸ್ತು, ಆಕೆ ಅಸಹಾಯಕಳಾಗಿ ಹೋರಾಟ ನಡೆಸುತ್ತಾಳೆ.

ಆಕೆಯ ದಲ್ಲದ ಆಕೆಯ ದೇಹದಲ್ಲಿ ಬಿಡುಗಡೆಯಾದಂತೆನಿಸಿದಾಗ ಅವಳಿಗೆ ತಲೆ ತಿರುಗಿದ ಹಾಗೆ ಆಗುತ್ತದೆ. ಆಕೆಯ ಮನಸ್ಸು ಗಾಯಗೊಂಡ ಅವಳ ದೇಹವನ್ನು ಬೇರೆಯಾಗಿಯೇ ನೋಡುತ್ತದೆ ಆಕೆ ಏನಾಗಿದ್ದಾಳೆ, ಎಲ್ಲಿದ್ದಾಳೆ ಎಂಬುದು ಅವಳಿಗೆ ತಿಳಿದಿದೆ ಆತಂಕ ಹಾಗೂ ಭಯ ಮತ್ತೆ ಅವಳಲ್ಲಿ ಮೂಡುತ್ತಿಂತು. ಆಕೆ ಹೆದರಿಕೆಯಿಂದ ಸ್ವಲ್ಪ ತಲೆ ತಿರುಗಿಸುತ್ತಾಳೆ ಅವಳ ಪಕ್ಕದಲ್ಲಿ ಆತ ಮಲಗಿದ್ದಾನೆ, ನಿಧಾನವಾಗಿ ಗೊರಕೆ ಹೊಡೆಯುತ್ತಿದ್ದಾನೆ, ಅವನು ಅಪರಿಚಿತನಲ್ಲ ಅವಳ

ಗಂಡ ಇದು ಸರಿತಾಳ ಬದುಕನ್ನು ಒಂದು ಘಟ್ಟದಲ್ಲಿ ನಿಲ್ಲಿಸಿ ಅವಳ ಪ್ರಮುಖವಾದ ಆಯ್ಕೆಗೆ ಕಾರಣವಾಗುವಂತಿದೆ. ಈಕೆಯ ಇಡೀ ಬದುಕನ್ನು ಬರೆಗಲ್ಲಿಗೆ ಹಚ್ಚುವಂತಹ ಘಟನೆ.

ಕಾದಂಬರಿಯ ಎರಡು ಪುಟಗಳಲ್ಲಿ ಕತ್ತಲೆಯಲ್ಲಿ ಕರಾಳ ಕೈಗಳು ಆಕೆಯನ್ನು, ಆಕೆಯ ವ್ಯಕ್ತಿತ್ವವನ್ನು ನಶಿಸುವ ವಿವರಣೆ–ಕನ್ನಡದಲ್ಲಿ ನವ್ಯ ಕಾದಂಬರಿಯಲ್ಲಿ ಬರುವ ಗಂಡು-ಹೆಣ್ಣಿನ ಸಂಬಂಧದ ಬಗ್ಗೆಗಿನ ಧೋರಣೆಯನ್ನು ಒಟ್ಟಾಗಿ ತಲೆ ಕೆಳಗಾಗಿಸುವಂತಹುದ ಕೇಟ್ ಮಿಲೆಟ್ "ಸೆಕ್ಸುಯಲ್ ಪಾಲಿಟಿಕ್ಸ್" ನಲ್ಲಿ "ಸೆಕ್ಸುಯಲ್ ಪಾಲಿಟಿಕ್ಸ್" ಹೇಗೆ ಇರುತ್ತದೆ ಎಂಬುದನ್ನು ಕೆಲವು ಬರಹಗಳ ಸಾಲು ಸಾಲಿನಲ್ಲೂ ತೋರಿಸುವಂತಹ ವಿವರಣೆ. ಹೆಣ್ಣಿನ "ಕಾಮ" ದ ಬಗ್ಗೆಗಿನ ಭಾವನೆಗಳನ್ನು ಅವಳಿಂದಲೇ ಅಭಿವ್ಯಕ್ತಿ ಪಡಿಸುವಂತಹುದು.

ಸರಿತಾಳ ಬದುಕಿನ ಆಯಾಮ ಬೇರೆಯಾಗುವುದು ಇಲ್ಲಿಂದಲೇ. ಗಂಡ "ಸ್ಯಾಡಿಸ್ಟ್" ಕತ್ತಲೆಯಾದರೆ ಭಯ ಆಕೆಗೆ. ಮನೋಹರನನ್ನು ಮದುವೆಯಾಗಿರುವುದು ತಂದೆ ತಾಯಿಯರ ವಿರೋಧ ಕಟ್ಟಿಕೊಂಡೇ. ತನ್ನನ್ನು ದ್ವೇಷಿಸುವ ತಾಯಿಯನ್ನು ತಾನು ಗೆದ್ದೆ ಎಂಬ ಮನೋಭಾವದಿಂದಲೇ ಸರಿತಾ ಮನೆ ಬಿಟ್ಟು ಬಂದು ಮನುವನ್ನು ಮದುವೆಯಾಗುತ್ತಾಳೆ. ಡಾಕ್ಟರ್ ಆಗುತ್ತಾಳೆ. ಎರಡು ಮಕ್ಕಳ ತಾಯಿ ಹಾಗೆ ನೋಡಿದರೆ "ಹ್ಯಾಪಿ ಹೋಂ" ಎಂದು ಬೀಗಬಹುದಾದಂತಹ ಬದುಕು. ಅವಳಿಗೆ ಸಾಧ್ಯವಾಗುತ್ತಿಲ್ಲ. ಒಂದು ದಿನ ರಾತ್ರಿಯಿಂದ ಪ್ರಾರಂಭವಾದ ಪ್ರಾಣಿಯ ತರಹ ಮೇಲೆ ಬೀಳುವ ಅವನ ಸ್ವಭಾವದಿಂದಾಗಿ ಆಕೆಯ ದೇಹ ಮಾತ್ರವಲ್ಲ ಮನಸ್ಸೂ ಘಾಸಿಗೊಂಡಿದೆ.

ಸರಿತಾಳ ಬದುಕಿನಲ್ಲಿ ದ್ವಂದ್ವ ಪ್ರಾರಂಭವಾಗುತ್ತದೆ. ಕೆಲಸ ಮನೆ, ಒಳ್ಳೆಯ ಲೇಡಿ ಡಾಕ್ಟರ್ ಹ್ಯಾಪಿ ಹೋಂನ ಗೃಹಿಣಿ. ಕಾಲೇಜಿನಲ್ಲಿ ಕೆಲಸಮಾಡುವ ಕವಿತೆ ಬರೆಯುವ ಆಕೆಯ ಅಂಬಾಧಕ ಮನು ಅಸ್ತಿತ್ವದ ಹಂತದಲ್ಲಿ ಮೊದಲು ಮೇಲುಗೈ ಪಡೆದಿದ್ದ. ನಂತರ ಇವಳು ಉದ್ಯೋಗದಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಿದ್ದ ಹಾಗೆ ಮನೆಯ ಬೆಲ್ ರಿಂಗ್ ಆಗುವುದು ಈಕೆಗಾಗಿ, ದಾರಿಯಲ್ಲಿ "ನಮಸ್ತೆ" ಗಳು ಈಕೆಗಾಗಿ, ಆಸ್ಪತ್ರೆಯಲ್ಲಿ ಅಡಿಯಿಂದ ತುದಿಯವರೆಗೆ ಈತ ಆಕೆಯ ಹಿಂಬಾಲಕ ಮಾತ್ರ, ಈಕೆಯೇ ಎಲ್ಲೆಲ್ಲೂ ಪ್ರಮುಖ, ಎಲ್ಲರ ಕೇಂದ್ರ ಬಿಂದು. ರಾತ್ರಿ ಯಾವುದ್ಯಾವುದೋ ಸಂದರ್ಭದಲ್ಲಿ ಮನೆಗೆ ಬರುವ ಸರಿತಾಗೆ ಎಲ್ಲದನ್ನು ಸರಿ ಮಾಡುವ ಹೊಣೆ, ಮಗ ಅಭೀಗೆ ಬ್ಲಾಂಕೆಟ್ ಹೊದ್ದಿಸಬೇಕು, ಮಗಳು ರೇಣುವನ್ನು ನೋಡಬೇಕು ಕಾಯುವ ಗಂಡನನ್ನು ಹೆಚ್ಚು ಹೆಚ್ಚು ಮಾತನಾಡಿಸಿ ಅವನ ಹಾಹೂಗಳಲ್ಲೇ ಆತನ ಅಸಹನೆ ಅರ್ಥ ಮಾಡಿಕೊಂಡು ತಾನು ತಡವಾಗಿ ಬಂದುದಕ್ಕೆ ಕ್ಷಮೆ ಯಾಚಿತಳಾಗಿರಬೇಕು——— ಹೀಗೆ ಇತ್ಯಾದಿಗಳಿಂದ ಸರಿತಳ ಬದುಕಿನ ದ್ವಂದ್ವ, ಹೋರಾಟ ಪ್ರಾರಂಭವಾಗುತ್ತದೆ. ಹೊಣೆಗಾರಿಕೆಗಳು ಆಕೆಯಲ್ಲಿ ಬೇಸರ ತರಿಸುತ್ತವೆ.

ಮದುವೆಯಾದ ನಂತರ ಯಾವುದೇ ದುಡಿಯುವ ಹೆಣ್ಣಿನ ಚಿತ್ರಣ ಇಲ್ಲಿ ಸಿಗುತ್ತದೆ. ದ್ವಂದ್ವ, ಹೋರಾಟ, ಹೊಯ್ದಾಟಗಳು ಸರಿತಾಳ ಬದುಕಿನಲ್ಲಿ ಅತ್ಯಂತ ಹೊಗೆಯಾಡುತ್ತಿರುವಾಗಲೇ ಅವಳಿಗೆ ಆಕೆಯ ತಾಯಿ ಸತ್ತು ಹೋದ ಸುದ್ದಿ, ಎಷ್ಟೋ ದಿನಗಳ ನಂತರ ತಿಳಿಯುತ್ತದೆ. ಗಂಡನ ಪುರುಷತ್ವದಿಂದ ವಿಮುಖಳಾಗಲು ಆಕೆ ಈ ಅವಕಾಶವನ್ನು ಬಳಸಿಕೊಳ್ಳುತ್ತಾಳೆ. ತನ್ನ ಹಾಗೂ ತನ್ನ ವ್ಯಕ್ತಿತ್ವ ಕಮರಿಸುವ ಮನೆಯಿಂದ ಬೆನ್ನು ತಿರುಗಿಸಿ ನಡೆಯಲು ತಾಯಿ ಸತ್ತ ಸುದ್ದಿಯನ್ನು ಬಳಸಿಕೊಂಡು ಮನೆಗೆ ನಡೆಯುತ್ತಾಳೆ, ಮನುವಿನೊಡನೆ ಕೂಡಾ ಆತನ "ಸ್ಯಾಡಿಸಂ" ಬಗ್ಗೆ ಆಕೆ ಏನನ್ನೂ ಮಾತನಾಡುವುದಿಲ್ಲ "ನೀನು ಮಾಡುತ್ತಿರುವುದು ನಿನಗೆ ತಿಳಿದಿದೆಯೇ" ಎಂದೂ ಸಹ ಕೇಳುವುದಿಲ್ಲ. ಆತನಿಗೆ ವಿಮುಖಳಾಗಿ ಒಂಟಿಯಾಗಿರುವ ತಂದೆಯನ್ನು ಹುಡುಕಿಕೊಂಡು ಮನೆಗೆ ಬರುತ್ತಾಳೆ.

ಲೇಖಕಿ "ಸ್ಟ್ರೀಮ್ ಆಫ್ ಕಾನ್‌ಶಸ್‌ನೆಸ್" ತಂತ್ರದೊಡನೆ ಸರಿತಾಳ ಈಗಿನ ಹಾಗೂ ಹಿಂದಿನ ಬದುಕಿನ ಆಯಾಮಗಳನ್ನು ಬಿಚ್ಚುತ್ತಾ ಹೋಗುತ್ತಾರೆ ಕಥೆ ಹೇಳಲು ಬಳಸಿರುವ ಮುಖ್ಯ ತಂತ್ರ ಇದು ಸರಿತಾ ನಮಗೆ ಆಕೆಯ ಕಥೆ ಹೆಚ್ಚು ಕಡಿಮೆ ಬಿಚ್ಚಿಡುವುದು ಆಕೆಯ ಪ್ರಜ್ಞೆಯ ಮುಖಾಂತರ, ಆಕೆಯ ನೆನಪುಗಳ ಮುಖಾಂತರ, ಈ ತರಹದ ತಂತ್ರದಿಂದ ಶಶಿಯವರು ಕಥೆ ಹೇಳುವ ವಿಧಾನವನ್ನು ಸುಲಭವಾಗಿಸಿಕೊಳ್ಳಲು ಪ್ರಯತ್ನಿಸಿದ್ದಾರೇನೋ ಎಂದೆನ್ನಿಸುತ್ತದೆ. ಏಕೆಂದರೆ ಸಂಕೀರ್ಣವಾಗಿರುವ ಈ

ಕಥೆಯ ಆಯಾಮಗಳು ಎಲ್ಲೋ ಒಂದು ಕಡೆ ಯಾಂತ್ರಿಕ ಎನ್ನಿಸುವುದು. ಅದರ ದಟ್ಟತೆಯ ಹರಿವಿನ ಬಿಗಿಯಾದ ಎಳೆಗಳನ್ನು ಕಳೆದುಕೊಳ್ಳುವುದು ಈ ರೀತಿಯ ಹೇಳುವ ತಂತ್ರ ದಿಂದಾಗಿ ಎಂದೆನ್ನಿಸುತ್ತದೆ. ಅಂದರೆ ಆಫ್ರಿಕನ್ ಬರಹಗಾರ್ತಿಯರ ಬರಹಗಳಿಗೆ ಹೋಲಿಸಿದಾಗ ಬಹುಶಃ ಇದು ಹೆಚ್ಚು ಸ್ಪಷ್ಟವಾಗುತ್ತದೆ. ನೆನಪುಗಳ ಮೂಲಕ ಹೇಳುತ್ತಾ ಹೋಗುವಾಗ ಒಬ್ಬ ವ್ಯಕ್ತಿಗೆ ಕೇಂದ್ರೀಕೃತವಾಗಿ ಬದುಕು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಆಗ ಎಲ್ಲಿಯೋ ಸಂದರ್ಭವನ್ನು ಪೂರ್ತಿಯಾಗಿ ಬಿಚ್ಚಿಡಲಿಲ್ಲವೇನೋ ಎಂಬಂತಹ ಕೊರತೆ ಉಳಿದುಬಿಡುತ್ತದೆ ಜೊತೆಗೆ ಇಡೀ ಕಾದಂಬರಿಯ ಪಾತ್ರ ಸರಿತಾ. ಆಕೆಯ ಪ್ರಜ್ಞಾವಲಯದ ನೆನಪುಗಳು, ಇತರ ಪಾತ್ರಗಳು ಬರಿಯ ನೆಪವಾಗಿ ಬಿಡುತ್ತವೆಯೇನೋ ಎಂಬ ಅನ್ನಿಸಿಕೆ ಅತ್ಯಂತ ಸಂಕೀರ್ಣವಾಗಿರುವ ಆಯಾಮಗಳು ಈ ಮೂಲಕವಾಗಿ ಅವುಗಳ ದಟ್ಟತೆಯ ಸೂಕ್ಷ್ಮತೆಯನ್ನು ಕಳೆದುಕೊಂಡು ಎಲ್ಲಿಯೋ ಯಾಂತ್ರಿಕತೆಯ ಧ್ವನಿ ಹೊರ ಹೊಮ್ಮುತ್ತದೆಯೇನೋ ಎಂದು ಹೇಳುವುದಷ್ಟೇ ನನ್ನ ಉದ್ದೇಶ. ಈ ಕಾದಂಬರಿ ಓದಿ ಮುಗಿಸಿದಾಗ ಇನ್ನೂ ಹೆಚ್ಚು ಸವಾಲಾಗಬಹುದಾದುದು, ದಟ್ಟ ಅನುಭವ ನೀಡಬಹುದಾದುದು-ನೆನಪುಗಳ ಮೂಲಕ ಸರಳವಾಗಿ ಹೇಳುವ ತಂತ್ರದಿಂದಾಗಿ ಎಲ್ಲಿಯೋ ದೌರ್ಬಲ್ಯತೆಯನ್ನು ಮೈಗೂಡಿಸಿಕೊಂಡಿತೇನೋ ಏನೋ ಎಂಬ ಭಾವನೆ ಉಂಟಾಗುತ್ತದೆ.

ಸರಿತಾ ಕತ್ತಲೆಗೆ ಹೆದರುವುದು ಬರಿಯ ಮನುವಿನ ಸ್ಯಾಡಿಸಂನಿಂದಾಗಿ ಮಾತ್ರವಲ್ಲ ಈಗ ಮನುವಿಗೆ ವಿಮುಖಳಾಗಿ ಮನೆಗೆ ಬಂದ ಹಾಗೆ ಚಿಕ್ಕ ವಯಸಿನಲ್ಲಿ ವಿಮುಖಳಾಗಿ ನಡೆದ ಘಟನೆ ಇದೆ. ಅದು ಅವಳ ತಮ್ಮನ ಸಾವಿನಲ್ಲಿ. ಧ್ರುವ ಆಕೆಯ ತಮ್ಮ ಅದ್ಭುತವೇನನ್ನೋ ನೋಡಲು ಹೊರಟ ಈಕೆಯನ್ನು ಈಕೆಯನ್ನು ತಡೆದು ಹಟ ಹಿಡಿದು ಈಕೆಯೊಡನೆ ಸಾಯಂಕಾಲದ ಹೊತ್ತಿನಲ್ಲಿ ಹೊರಡುತ್ತಾನೆ. ಹಟದ ಹುಡುಗ. ವಾಪಸ್ಸು ಸರಿತಾ ಹೊರಟು ನಿಂತಾಗ ಆತ ಬರದೇ "ಶಿವಾಜಿ ಕೋಟೆ" ಕಟ್ಟುತ್ತೇನೆಂದು ನಿಲ್ಲುತ್ತಾನೆ ತಾನು ಹೊರಟರೆ ಆತ ಬರುತ್ತಾನೆಂಬ ನಂಬಿಕೆಯಿಂದ ಆತನಿಂದ ವಿಮುಖಳಾಗಿ ಈಕೆ ಅಷ್ಟು ದೂರ ನಡೆದು ಬಿಟ್ಟಳು ಅಷ್ಟು ದೂರ ನಡೆದ ಮೇಲೆ ತಿರುಗಿನೋಡುತ್ತಾಳೆ ಪಕ್ಕದಲ್ಲಿರುವ ಚಿಕ್ಕ ಹಳ್ಳದಲ್ಲಿ ಮುಳುಗುತ್ತಿದ್ದಾನೆ. ಆಗಲೂ ಆಕೆಗೆ ಗೊತ್ತಾಗಲಿಲ್ಲ. ಆತ ಸಾವಿನ ಮೆಟ್ಟಿಲು ಏರುತ್ತಿದ್ದಾನೆಂದು ಆಕೆಯ ಅರಿವಿಗೆ ಬರುವ ಮೊದಲೇ ಭಯ ಭೀತಿಯಿಂದ ಸದ್ದಿಲ್ಲದೇ ಮನೆ ಸೇರಿದ್ದಳು ತಮ್ಮನ ಸಾವಿಗೆ ಸಾವಿಗೆ ವಿಮುಖಳಾಗಿ ನಡೆದು ಬಿಟ್ಟಿದ್ದಳು. ಆಗಲೇ ತಾಯಿ ನುಡಿದ್ದಿದ್ದು, ಅವನ ಸತ್ತಾ. ನೀನ್ಯಾಕೆ ಇನ್ನೂ ಬದುಕಿದೀಯಾ, ಆಕೆಯೇ ಅವನ ಸಾವಿಗೆ ಕಾರಣ ಎಂದು ತಾಯಿ ನುಡಿದು ಆಕೆಯೊಡನೆ ಕಠಿಣವಾಗಿ ವರ್ತಿಸುತ್ತಾ ಬರುವುದು ಸರಿತಾಳ ಹೃದಯವನ್ನು ಹಿಂಡಿ ಹಿಪ್ಪೆ ಮಾಡಿದೆ. ಚಿಕ್ಕ ವಯಸ್ಸಿನಲ್ಲಿ ಆದ ಹೃದಯದ ಗಾಯ ಇನ್ನೂ ಮಾಗಿಲ್ಲ. ಈಗ ಗಂಡನ "ಸ್ಯಾಡಿಸಂ" ಕತ್ತಲೆಗೆ ಹಿಡಿದಿರುವ ಭಯವಾದರೆ, ಧ್ರುವನ ಸಾವೂ ಸಹ ಕತ್ತಲೆಗೆ ಹಿಡಿದಿರುವ ಮತ್ತೊಂದು ಭಯ, ಕತ್ತಲೆಗೆ ಹೆದರುತ್ತಿದ್ದ ಧ್ರುವ ರಾತ್ರಿ ಹೊತ್ತಿನಲ್ಲಿ ಈಕೆಯ ಹಾಸಿಗೆಯ ಹತ್ತಿರ ಸರಿದು ಸರೂ ತಾಯಿ, ನನ್ನನ್ನು ಬಿಟ್ಟು ಹೋಗಬೇಡ. ನಾನೂ ಬರುತ್ತೇನೆ ಎಂಬ ಮಾತುಗಳು ಯಾವಾಗಲು ನೆನಪಾಗಿ ಕತ್ತಲೆಯ ಭಯವನ್ನು ಹೆಚ್ಚಿಸುತ್ತದೆ. ತನನ್ನು ನೆನಪಿಸಿಕೊಳ್ಳದೇ ಸತ್ತ ತಾಯಿ ತನ್ನನ್ನೇ ಜಯಿಸಿ ಬಿಟ್ಟಳು ಎನಿಸುತ್ತದೆ ಆಕೆಗೆ "ಸರೂ ತಾಯಿ" ಎಂದು ಧ್ರುವ ಕರೆದರೆ ಇಷ್ಟಪಡದಿದ್ದ ಸರೂ ಈಗ ತಂದೆಯ ಜೊತೆಗಿರುವ ಹುಡುಗ ಮಾಧವ "ಸರೂ ತಾಯಿ" ಎಂದು ಕರೆದರೆ ಏನೂ ಹೇಳುವುದಿಲ್ಲ ತಂದೆ ಮಾಧವರ ಜೊತೆ ಹಳೆಯ ಮನೆಯಲ್ಲಿ ಯಾರ, ಯಾವ ಹೊಣೆಗಾರಿಕೆಯೂ ಇಲ್ಲದೇ ಜವಾಬ್ದಾರಿಯಿಲ್ಲದ ಬದುಕುವ ಬದುವ ಬದುಕು ಸರಳ ಎನ್ನಿಸುತ್ತದೆ ಆಕೆಗೆ ಇಬ್ಬರು ಗೆಳತಿಯರು ಭೇಟಿಯಾಗುತ್ತಾರೆ. ಸ್ಮಿತಾ ಗಂಡನಿಗಾಗಿಯೇ ಬದುಕನ್ನು ರೂಪಿಸಿಕೊಂಡ ಹುಡುಗಿ. ನಲುಮದುವೆಯಾಗದೇ ಉಳಿದು ಉದ್ಯೋಗದಲ್ಲಿ. ತನ್ನ ವ್ಯಕ್ತಿತ್ವದ ಬಗ್ಗೆ ಆಸಕ್ತಿಯಿರುವ ಹುಡುಗಿ. ಇವರಿಬ್ಬರ ನಡುವೆ ತನ್ನ ಬದುಕನ್ನು ಅರ್ಥೈಸಿಕೊಳ್ಳ ಹೊರಡುವ ಸರಿತಾಗೆ ತನ್ನ ಬದುಕಿನಲ್ಲಿ ತನ್ನದೇ ಆದ ವಲಯ ಇದೆಯೇ ಎನ್ನಿಸತೊಡಗುತ್ತದೆ. ಮನುವಿನೊಡನಷ್ಟೇ ಅಲ್ಲ ಬೂಜಿ ಜೊತೆ ಹಾಗೂ ಪದ್ಮಾರಾವ ಜೊತೆಗಿನ ಸಂಬಂಧದಲ್ಲಿಯೂ ಗಂಡು-ಹೆಣ್ಣಿನ ಸಂಬಂಧದ

ನಡುವಿರುವ ಬಿರುಕುಗಳು ಅರ್ಥವಾಗುತ್ತಾ ಹೋಗುತ್ತದೆ.

ನಂತರ ಈಕೆ ಬಾಂಬೆಗೆ ತಿರುಗಿ ಹೋಗದ, ಕಾರಣ. ಆಕೆಯಿಂದ ಪ್ರತ್ಯುತ್ತರ ಹೋಗದ ಕಾರಣ ಮನು ಮನೆಗೆ ಬರುತ್ತೇನೆ, ಎಂದು ಕಾಗದ ಬರೆಯುತ್ತಾನೆ ಅವಳ ಮನದಲ್ಲಿ ಗಾಬರಿಯಾಗುತ್ತದೆ. ತಂದೆಯೊಡನೆ ಮೊಟ್ಟ ಮೊದಲ ಬಾರಿಗೆ ಆತ "ಸ್ಯಾಡಿಸ್ಟ್" ಎಂದು ಬಿಚ್ಚಿ ಹೇಳುತ್ತಾಳೆ. ಅತನೊಡನೆ ಬದುಕು ಅಸಾಧ್ಯ ಎಂದು ನುಡಿಯುತ್ತಾಳೆ. ತಂದೆ ಹೆಚ್ಚು ಹೆಚ್ಚು ಮೌನಿಯಾಗತೊಡಗಿದಾಗ ತಾನು ಸಾಂಪ್ರದಾಯಿಕವಾಗಿ ಮದುವೆಯಾಗಿದ್ದರೆ ತಂದೆ ಹೆಚ್ಚು ಜವಾಬ್ದಾರರಾಗುತ್ತಿದ್ದರೇನೋ! ಈಗ ತನ್ನದು "ಲವ್ ಮ್ಯಾರೇಜ್" ಆಗಿರುವುದರಿಂದ ಆತ ಜವಾಬ್ದಾರಿ ತೆಗೆದುಕೊಳ್ಳುತ್ತಿಲ್ಲ ವೇನೋ ಎನ್ನಿಸುತ್ತದೆ ಮನು ಟೆಲಿಗ್ರಾಂ ಕಳಿಸಿದಾಗ ಅವನಿಂದ ತಪ್ಪಿಸಿಕೊಳಲು ಊರಿಂದ ಹೊರಡುತ್ತೇನೆ ಎನ್ನುತ್ತಾಳೆ. ಮಾಧವನಾಗಲೀ ತಂದೆಯಾಗಲೀ ಮನುವಿಗೆ ಬಾಗಿಲು ತೆಗೆಯಕೊಡದು ಎನ್ನುತ್ತಾಳೆ ತಂದೆ ಜೀವನದಲ್ಲಿ ಮತ್ತೊಮ್ಮೆ ವಿಮುಖಳಾಗಬೇಡ ಎನ್ನುತ್ತಾರೆ. ನಿನ್ನ ತಮ್ಮ ಸತ್ತಾಗ ವಿಮುಖಳಾದೆ, ತಾಯಿಗೆ ವಿಮುಖಳಾದೆ ಈಗ ಮತ್ತೆ ವಿಮುಖಳಾಗಿ ನಡೆಯಬೇಡ ಎನ್ನುತ್ತಾರೆ. ಮನುವಿನ ಜೊತೆ ಕುಳಿತು ಮಾತನಾಡು ಎನ್ನುತ್ತಾರೆ. ಈಕೆ ಸಾಧ್ಯವಿಲ್ಲ ಎಂದರೆ ಹೇಳಿದರೂ ಕೊನೆಗೆ ಮನು ಬಂದರೆ ಕಾಯಲು ಹೇಳಿ ಎಂದು ಫಿಟ್ಸ್ ಬಂದಿರುವ ಮಗುವನ್ನ ಪರೀಕ್ಷೆ ಮಾಡಲು ಕಾತುರದಿಂದ ಹೆಜ್ಜೆ ಹಾಕುತ್ತಾಳೆ ಅವಳ ಮನಸ್ಸನ್ನು ಆಕ್ಷಣ ಆವರಿಸುವುದು ಮನುವಲ್ಲ. ಫಿಟ್ಸ್ ಬಂದಿರುವ ಮಗು ಆಕ್ಷಣಕ್ಕೆ ಉದ್ಯೋಗಕ್ಕೆ. ಮನಸ್ಸನ್ನು ತೊಡಗಿಸಿಕೊಂಡುಬಿಡುವ ಅವಳ ಆಯ್ಕೆ ಫಿಟ್ಸ್‌ನ ಹಲವಾರು ಸಾಧ್ಯತೆಗಳ ಬಗ್ಗೆ ಯೋಚಿಸುತ್ತಾ ನಡೆಯುವ ಕಾದಂಬರಿಯ ಅಂತ್ಯ ಸಾಂಕೇತಿಕವಾಗಿದೆ. ಆಕೆ ಮನುವನ್ನು ಮತ್ತೆ ಭೇಟಿಯಾಗಲು ನಿರ್ಧರಿಸುವುದೂ ಸಹ ಕತ್ತಲೆಯ ಭಯವನ್ನು ಕಿತ್ತೊಗೆಯುವ ಒಂದು ಸಾಧ್ಯತೆ. ಮನದಲ್ಲಿ ಎಲ್ಲಾ ಫಿಟ್ಸ್ ಸಾಧ್ಯತೆಗಳ ಬಗ್ಗೆ ಯೋಚಿಸುತ್ತಾ ತನ್ನ ವೃತ್ತಿ ಮನೋಧರ್ಮಕ್ಕೆ ಅಂಟಿಕೊಳ್ಳುವುದು ಇನ್ನೊಂದು ಸಾಧ್ಯತೆ. ಜೀವನದಲ್ಲಿ ವಿಮುಖತೆಗೇ ಅಂಟಿಕೊಂಡಿದ್ದ ಈಕೆ ಅವನ್ನ ಮೀರಿ ಮತ್ತೆ ಬದುಕಿಗೆ ಅಂಟಿಕೊಂಡು ಸಾಧ್ಯತೆಗಳ ಬಗ್ಗೆ ಯೋಚಿಸುವ ನಿರ್ಧಾರವೇ ಕತ್ತಲೆಯ ಭಯಾನಕ ಕತೆಗಳನ್ನು ಹೊಡೆದೋಡಿಸುವ ಪ್ರಯತ್ನ.

ಈ ಕಾದಂಬರಿ ಹೆಣ್ಣಿನ ಹೋರಾಟದೊಂದಿಗೆ ಜೀವನದ ಸೂಕ್ಷ್ಮ ವಿವರಗಳನ್ನು ಹಿಡಿದಿಡುತ್ತದೆ. ಹೆಣ್ಣಿನ ಬದುಕಿನಲ್ಲಿರುವ ಉದ್ಯೋಗ ಕೌಟುಂಬಿಕ ಜವಾಬ್ದಾರಿಯ ನಡುವಿನ ದ್ವಂದ್ವ ಅಸ್ತಿತ್ವದಲ್ಲಿ ಪ್ರಮುಖರಾದಾಗ ಗಂಡನ ಕೀಳರಿಮೆಯೊಡನೆ ಹೋರಾಟ ನಡೆಸುವ ದ್ವಂದ್ವ ಪುರುಷತ್ವದಿಂದ ಮೂಡಿ ಬರುತ್ತಿರುವ ಹೆಣ್ಣಿನ ಹೊಸ ಅಸ್ತಿತ್ವವನ್ನು ನಶಿಸುವ ಪುರುಷನೊಡನೆ ಹೋರಾಡಬೇಕಾದ ದ್ವಂದ್ವ ಗಂಡು ಹೆಣ್ಣಿನ ಲೈಂಗಿಕ ಸಂಬಂಧ ಹೊಣೆಗಾರಿಕೆ, ಜವಾಬ್ದಾರಿಯ ದ್ವಂದ್ವ—ಇಂತಹ ಎಲ್ಲಾ ಸಮಸ್ಯೆಗಳನ್ನು ಕಾದಂಬರಿ ಬಿಂಬಿಸುತ್ತದೆ. ಹೋರಾಟದೊಂದಿಗೆ ಹೆಣೆದು ಕೊಂಡಿರುವ ಸೂಕ್ಷ್ಮತೆಗಳೂ ಇಲ್ಲಿವೆ. ಹೋರಾಟದ ಬದುಕೆಂದರೆ ಕೇವಲ ಕಪ್ಪು–ಬಿಳುಪಲ್ಲ. ಸಂಕೀರ್ಣತೆಯ ಅಂಶಗಳು ಹಲವಾರು. ಇಂತಹ ಆಯಾಮಗಳನ್ನು ಈ ಕಾದಂಬರಿ ಹಿಡಿದಿಡುತ್ತದೆ. ಸಾವು, ಸಾವಿನಲ್ಲಿ ಮೂಡಿ ಬರುವ ದೈನ್ಯತೆ. 'ಸಂಬಂಧಗಳ ಒಳಗಿನ ಬಿರುಕು ಪ್ರೀತಿ. ಏಕಾಂಗಿತನ ಇಂತಹವುಗಳನ್ನು ಈ ಕಾದಂಬರಿ ಹಿಡಿದಿಡುತ್ತದೆ. ಕನ್ನಡಸಾಹಿತ್ಯದಲ್ಲಿ ನವ್ಯ—ಬಂಡಾಯ ಸಾಹಿತ್ಯಗಳೆರಡೂ ನೀಡದ ಹೆಣ್ಣು ಗಂಡಿನ ಸಂಬಂಧದ ಆಯಾಮ ಇಲ್ಲಿದೆ ಇಲ್ಲಿಯದು ಹೆಣ್ಣಿನ ಗ್ರಹಿಕೆಯ ಮುಖಾಂತರ ಮೂಡಿ ಬಂದ ಹೆಣ್ಣು—ಗಂಡಿನ ಸಂಬಂಧ. ಈ ಕಾದಂಬರಿ 'ಅದರ ಎಲ್ಲಾ ಕಲಾಕೃತಿ ಗುಣಗಳೊಡನೆ ಹಾಗೂ ಮಿತಿಗಳೊಡನೆ ಸ್ತ್ರೀವಾದದ–ಒಂದು ಅಭಿವ್ಯಕ್ತಿಯೆಂದರೆ ಅತಿಶಯೋಕ್ತಿಯೇನಲ್ಲ.



# ನನ್ನ ತಂಗಿ

ಜಿ. ಅನ್ವರ್ ಸಾಬ್.

ಆರೀಫ ತುಂಬಾ ಮೃದು ಸ್ವಭಾವದ ಹುಡುಗಿ. ಅವಳು ಯಾರ ಬಳಿಯೂ ಹೆಚ್ಚಾಗಿ ಮಾತನಾಡುತ್ತಿರಲಿಲ್ಲ. ಅವಳಾಯಿತು ಅವಳ ಮನೆಯ ಕೆಲಸವಾಯಿತು. ತಂದೆ ತಾಯಿ ಎಂದರೆ ತುಂಬಾ ಹೆದರುತ್ತಿದ್ದಳು. ದೊಡ್ಡವರೆದುರು ಯಾವತ್ತೂ ಮಾತನಾಡುತ್ತಿರಲಿಲ್ಲ. ಈ ಹುಡುಗಿ ಬಾಲ್ಯದಿಂದಲೂ ಹೀಗೆಯೆ ದೊಡ್ಡವರಿಗೆ ಅಂಜುತ್ತ ಅಳುಕುತ್ತ ತಲೆಬಾಗಿ ನಡೆಯುತ್ತ ಬೆಳೆದಿದ್ದಳು ಆರೀಫ.

ನಾನು ಇವಳು ಒಂದೇ ಶಾಲೆಯಲ್ಲಿ ಓದಿದ್ದೆವು. ಆದ್ದರಿಂದ ನನಗೆ ಅವಳ ಒಂದೊಂದು ಕೋಮಲದ ನಡತೆಯೂ ನನಗೆ ತಿಳಿದಿತ್ತು. ಒಮ್ಮೊಮ್ಮೆ ನಾನು ಮನದಲ್ಲಿ ಅಂದುಕೊಳ್ಳುತ್ತಿದ್ದೆ. ಈ ಹುಡುಗಿಗೆ ಸುಂದರವಾದ ಸಂಸಾರ, ಹಿಂಸೆ ಕೊಡದ ಗಂಡ ತಾಯಿಯಂತಿರುವ ಅತ್ತೆ ಹಾಗೂ ನೋವಿಲ್ಲದ ಸಹ ಬಾಳ್ವೆ ದೊರೆಯಲೆಂದು ಆಶಿಸುತ್ತಿದ್ದೆ.

ಆರೀಫಳ ಮದುವೆ ದಿ. ೪-೩-೧೯೬೦-ನೇ ಭಾನುವಾರ ಖಾದರ್ ಬಾಷ ಎಂಬುವವನ ಜೊತೆ ನಡೆಯಿತು. ಈ ಹುಡುಗ ಒಂದು ಚಿಕ್ಕ ಟೈರ್ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದ. ಆದರೂ ಸಾವಿರಗಟ್ಟಲೆ "ವರ" ದಕ್ಷಿಣೆ ಕೇಳಿದ. ಮಗಳು ಸುಖವಾಗಿರಲೆಂದು ಹೆಣ್ಣು ಹೆತ್ತ ತಂದೆ-ತಾಯಿಯರು ಅವನು ಕೇಳಿದಷ್ಟು ಹಣ, ಒಡವೆ ಎಲ್ಲವನ್ನೂ ಕೊಟ್ಟು ಮದುವೆ ಮಾಡಿದರು. ಮದುವೆಗೆ ನನಗೂ ಆಹ್ವಾನ ಬಂದಿತ್ತು. ನಾನಾಗ ತುಂಬಾ ತೊಂದರೆಯಲ್ಲಿದ್ದ ಕಾರಣ ಮದುವೆಗೆ ಹೋಗಲಿಲ್ಲ. ಸ್ವಲ್ಪ ದಿನವಾದ ಮೇಲೆ ಊರಿಗೆ ಹೋದೆ ಊರಲ್ಲಿ ಎಲ್ಲರೂ ಅವಳ ಮದುವೆಯ ಸಂಭ್ರಮದ ವಿಷಯ ಹೇಳಲು ಹಿಂಜರಿಯುತ್ತಿದ್ದರು. ಅವಳನ್ನ ನಾನು ಭೇಟಿಯಾಗಬೇಕೆಂದು ಬಹಳ ಪರದಾಡಿದೆ, ಆದರೆ ಅವಳಾಗ ಗಂಡನ ಮನೆಯಲ್ಲಿ ದಾವಣಗೆರೆಯಲ್ಲಿದ್ದರಿಂದ ನಾನು ಅವಳನ್ನ ಭೇಟಿ ಮಾಡದೇ ಬೆಂಗಳೂರಿಗೆ ಹಿಂದಿರುಗಿದೆ.

ನಾನು ಇನ್ನೊಮ್ಮೆ ಊರಿಗೆ ಹೋದೆ ಹೋದವನೆ ಆರೀಫಳ ಮನೆಗೆ ಹೋದೆ. ಅವಳ ಮದುವೆಯಾಗಿ ಸುಮಾರು ೪ ತಿಂಗಳಾಗಿರಬಹುದು. ಅಷ್ಟೊತ್ತಿಗೆ ಅವಳ ಮನದಲ್ಲಿ "ವರ" ದಕ್ಷಿಣೆ ಎಂಬ ಭೂತ ನುಗ್ಗಿ ಅವಳು ತವರಿಂದ ಹೊತ್ತು ಹೋಗಿದ್ದ ಕನಸಿನ ಹೊರೆಯೆಲ್ಲ ಕೆಳಗೆ ಕೆಸರಲ್ಲಿ ಬಿದ್ದು ಒದ್ದಾಡುತ್ತಿತ್ತು. ನಾನು ಅವಳನ್ನು ಒಮ್ಮೆ ದಿಟ್ಟಿಸಿ ನೋಡಿದೆ, ಅವಳ ಮುಖದಲ್ಲಿ ನಗುವಿಲ್ಲ ಮನಸಲ್ಲಿ ನೆಮ್ಮದಿ ಇಲ್ಲ. ನನ್ನೊಡನೆ ಮಾತಾಡಲು ಬಾಯಿ ಬರುತ್ತಲೇ ಇಲ್ಲ. ಇವಳ ಮೌನ ನೋಡಿ ನನಗೆ ಅರ್ಥವಾಯಿತು ಇವಳು ಜೀವನದಲ್ಲಿ ನೊಂದಿದ್ದಾಳೆಂದು.

ಆರೀಫ ಬೇರೆ ಯಾರೂ ಅಲ್ಲ ನನ್ನ ತಂಗಿ ಅಂದರೆ ನನ್ನ ಚಿಕ್ಕಪ್ಪನ ಮಗಳು, ಅವಳು ನನ್ನನ್ನು ನೋಡಿದ ತಕ್ಷಣ "ಅಣ್ಣಾ ನಾನು ಜೀವನದಲ್ಲಿ ಮೋಸ ಹೋದೆ ಬಂಗಾರದಂತ ಸಂಸಾರ ನಡೆಸಬೇಕೆಂದು ಕನಸು ಕಂಡಿದ್ದ ನನ್ನ ಆಸೆಯೆಲ್ಲ ಗಾಳಿಯಲ್ಲಿ ತೂರಿ ಹೋಯಿತು" ಎಂದು ನನ್ನ ತಂಗಿ ನನ್ನೆದುರಿಗೆ ಕಣ್ಣೀರ ಕೋಡಿ ಹರಿಸಿದಳು. ಅವಳ ಕಂಬನಿ ನೋಡಿ ನನಗೆ ತುಂಬಾ ಬೇಸರವಾಯಿತು. ನನಗೂ ಕಣ್ಣಲ್ಲಿ ನೀರು ಬಂತು. ಆರೀಫ ಇನ್ನೂ ಕೇವಲ ೨೦ ವರ್ಷ ಪ್ರಾಯದ ಹುಡುಗಿ. ಇಷ್ಟು ಚಿಕ್ಕ ವಯಸ್ಸಿನ ಹುಡುಗಿ ಮದುವೆಯಾಗಿ ಗಂಡ ಬಿಟ್ಟು ಮನೆಯಲ್ಲಿ ಬಿಡಕಲಾಗಿದ್ದಳೆಂದರೆ ಯಾವ ಮನುಷ್ಯ ತಾನೆ ನೋಯದಿರುತ್ತಾನೆ. ನನ್ನ ನೋವಿನಲ್ಲೂ ನಾನು ಅವಳ ತಂದೆ ತಾಯಿರಿಗೆ ಘಟನೆಯ ಹಿನ್ನಲೆಯನ್ನು ವಿಚಾರಿಸಿದೆ. ಅವರು ಕಂಬನಿಗರೆಯುತ್ತ "ಅವನು ಮದುವೆಯಲ್ಲಿ ಕೇಳಿದ ದಕ್ಷಿಣೆ ಸಾಲದೆಂದ ಆದರೂ ನಾವು ಮಗಳು ಸುಖವಾಗಿರಲೆಂದು ಮತ್ತೆ ಸ್ವಲ್ಪ ದಿನ ಬಿಟ್ಟು ಬೇಕಾದರೆ ಹಣ ಕೊಡುತ್ತೇವೆಂದು ಹೇಳಿದೆವು: ಆದರೂ ಅವನು ನಮ್ಮ ಮಾತನ್ನು ಕೇಳದೆ ಮಗಳನ್ನು ಮನೆಗೆ ಕಳಿಸಿ ಬೇರೊಬ್ಬಳ ಜೊತೆ ಸುತ್ತಾಡುತ್ತಿದ್ದಾನೆ. ನಾವು ಕೇಳಿದರೆ ನಿಮ್ಮ ಮಗಳನ್ನು ಕಳಿಸಿ ಅವಳಿಗೂ ಸಾಕುತ್ತೇನೆಂದು ಹೇಳಿ ತಾಳಿ ಕಟ್ಟಿದವಳಿಗೆ ಸುಣ್ಣ

ಬೀದಿಯಲ್ಲಿ ಸುತ್ತಾಡಿ ಬಂದವಳಿಗೆ ಬೆಣ್ಣೆ ಈ ರೀತಿ ಮಾಡುತ್ತಾನೆ. ಆದ್ದರಿಂದ ನಾವು ಕಳಿಸಿಲ್ಲ, ನಮ್ಮ ಮಾಗಳು ಇದಕ್ಕೆ ಏನಾದರು ಮಾತನಾಡಿದರೆ ಅವಳನ್ನ ಹೊಡೆದು ಹಿಂಸಿಸುತ್ತಾನೆ. ಆದ್ದರಿಂದ ನಾವು ಮನೆಗೆ ಕರೆದುಕೊಂಡು ಬಂದೆವು ಎಂದು ಗೋಳಾಡಿದರು.

ಈ ಮಾತುಗಳನ್ನು ಆಲಿಸುತ್ತಿದ್ದ ಆರೀಫಳ ಮುಖವನ್ನೊಮ್ಮೆ ನೋಡಿದೆ. ಅವಳ ಮುಖದಲ್ಲಿ ವೇದನೆಯು ರೂಪ ತುಂಬಿತ್ತು. ಇನ್ನು ರೆಕ್ಕೆ ಮುರಿದ ಹಕ್ಕಿಯಂತೆ ಒದ್ದಾಡುತ್ತಿತ್ತು. ಅವಳ ಮನ. ನಾನು ಮತ್ತೊಮ್ಮೆ ಆರೀಫಳ ತಂದೆ ತಾಯಿಗೆ "ನೀವು ಈ ವಿಷಯವಾಗಿ ಪೋಲೀಸ್ ಇಲಾಖೆಗೆ ತಿಳಿಸಿದಿರಾ" ಎಂದೆ. "ನಾವು ಪೋಲೀಸ್ ಹಾಗೂ ಲಾಯರ್‌ಗಳ ಬಳಿಯೂ ನಮ್ಮ ಕಷ್ಟ ಹೇಳಿಕೊಂಡೆವು ಆದರೆಅವ ರ್‍ಯಾರು ನಮಗೆ ನ್ಯಾಯ ದೊರಕಿಸಿಕೊಡಲಿಲ್ಲ. ಅದಕ್ಕೆ ಸುಮ್ಮನಾಗಿದ್ದೇವೆ" ಎಂದರು.

ಕಾನೂನು ಇಲಾಖೆಯ ಕೆಲವರೂ ಇದೇ ಗುಂಪಿನವರು. ಒಂದು ಹೆಣ್ಣಿನ ಬಾಳಿನ ವಿಷಯದಲ್ಲೂ ಲಂಚ ಪಡೆದು ಅಲ್ಪ-ಸ್ವಲ್ಪ ಬೆಳಕಿರುವ ಬಾಳನ್ನು ಸಂಪೂರ್ಣ ಕತ್ತಲ ಕೋಣೆಯಂತೆ ಮಾಡುತ್ತಾರೆ. ಪಾಪ ಆರೀಫ ಇನ್ನೂ ೨೦ ರ ಹರೆಯಕ್ಕೇ ಗಂಡನಿದ್ದರೂ ವಿಧವೆಯಂತೆ ಬಾಳಬೇಕು. ನಾನು ಅವಳಿಗೆ ಬಲವಂತವಾಗಿ ಕೇಳಿದೆ. "ನೀನು ಮನಸ್ಸು ಮಾಡಿದರೆ ಪುನಃ ಹೊಸ ಜೀವನ ಆರಂಭಿಸಬಹುದು. ಗಂಡಿಗೆಷ್ಟು ಸ್ವಾತಂತ್ರ್ಯವಿದೆಯೊ ಹೆಣ್ಣಿಗೂ ಅಷ್ಟೇ ಸ್ವಾತಂತ್ರ್ಯವಿದೆ. ನೀನಿನ್ನು ಚಿಕ್ಕ ಹುಡುಗಿ. ನಡೆದುದನೆಲ್ಲ ಒಂದು ಕನಸೆಂದು ತಿಳಿದು ಹೊಸ ಜೀವನದತ್ತ ಸಾಗು. ನೀನೊಬ್ಬಳು ಈ ರೀತಿ ಮುನ್ನಡೆದರೆ ಇನ್ನು ನೂರಾರು ಮಹಿಳೆಯರು ನಿನ್ನಂತೆ ಜೀವನ ನಡೆಸಲು ಆರಂಭಿಸುತ್ತಾರೆ." ಎಂದೆಲ್ಲಾ ಒತ್ತಾಯಿಸಿದೆ. ಆದರೂ ಅವಳು ಸಮಾಜದ ಸಂಪ್ರದಾಯಗಳಿಗೆ ತಲೆ ಬಾಗುತ್ತಾ "ಇಲ್ಲಾ ಅಣ್ಣ ನಾನು ನನ್ನ ಜೀವನದಲ್ಲಿ ಪಡೆದು ಬಂದುದನ್ನೆಲ್ಲ ಅನುಭವಿಸುತ್ತೇನೆ" ಎಂದು ಅವಳ ಛಲವನ್ನು ಬಿಡದೆ ಕತ್ತಲೆಯ ಕೋಣೆಯಲ್ಲಿ ಮೂಖ ಹಕ್ಕಿಯಂತೆ ಒದ್ದಾಡುತ್ತ, ಕೊರಗುತ್ತ ಹಗಲನ್ನು ಹಗಲನ್ನು ಇರುಳಂತೆ ಕಾಣುತ್ತ ಜೀವನ ನಡೆಸುತ್ತಿದ್ದಾಳೆ.

ಇಂತಹ ಘಟನೆಗಳು ಒಂದಲ್ಲ ಎರಡಲ್ಲ ನೂರಾರು ನಡೆಯುತ್ತವೆ, ಆದರೆ ಇಷಯದ ಬಗ್ಗೆ ಸರ್ಕಾರದವರು ಹೆಚ್ಚು ಗಮನ ಕೊಡುತ್ತಿಲ್ಲ. ಇವರ ಕಾನೂನು ಬರೀ ಪುಸ್ತಕ ಹಾಗೂ ಪತ್ರಿಕೆಯಲ್ಲಿ ಪ್ರಕಟಿಸುವುದಷ್ಟೆ ಅದನ್ನು ಯಾರೂ ಸರಿಯಾಗಿ ಜಾರಿ ಮಾಡುತ್ತಿಲ್ಲ, ದಯವಿಟ್ಟು ಸ್ತ್ರೀಯರೆಲ್ಲ ಒಟ್ಟಾಗಿ ಹೋರಾಡಿ ಇಂತಹ ಘಟನೆಗಳು ತೊಲಗಿಸಿ.

## "ಡಿಸ್ ಮಿಸ್"

"ದುಡಿಯುವ ಮಹಿಳೆ"
ಪಟ್ಟ – ಭದ್ರ
ನನಗಿಲ್ಲ
"ಕಸ ಮುಸುರೆಯವಳು"
ಅನ್ನುವ ಬಿರುದು ಮಾತ್ರ
ನನಗೆ.
ವಾರದ ರಜಾ ದಿನದಿಂದ
ಹೆರಿಗೆಯ ರಜೆಯವರೆಗೆ
ಯಾವ ರಜೆಯೂ
ನನಗಿಲ್ಲ.
ದೀಪಾವಳಿ–ಯುಗಾದಿಗೂ
ರಜೆ ಇಲ್ಲ–ಜಾಸ್ತಿ ಕೆಲಸ!
ಓಟಿ ಇಲ್ಲ–ಬೋನಸ್ ಇಲ್ಲ
ಗ್ರ್ಯಾಚುಟಿ, ಪೆನ್ಷನ್ ಮಾತೇ ಇಲ್ಲ
ಏಕೆಂದರೆ ನಾನು–ನನ್ನಂತವರು
ರಿಟೈರಾಗುವುದೇ ಇಲ್ಲ
ಯಾವಾಗಲೂ
ಡಿಸ್‌ಮಿಸ್ ಆಗುತ್ತೇವೆ.

ಹಿತೈಷಿ.



# ಮನಸ್ಸಿದ್ದರೆ ಮಾರ್ಗ

ಸ್ತ್ರೀಗಂತೂ ಕಟ್ಟುಪಾಡುಗಳೇನಕ ಆಕೆ ಗೃಹಿಣಿಯಾದರಂತೂ ಸಮಸ್ಯೆಗಳು ಮತ್ತಷ್ಟು ಹೆಚ್ಚುತ್ತವೆ. ಉದ್ಯೋಗಸ್ಥ ಮಹಿಳೆಯರನೇಕರು ತಮ್ಮ ಗಂಡ ಮಕ್ಕಳ ಬಗ್ಗೆ ಹೇಳದ್ದನ್ನೇ ಹೇಳಿಕೊಳ್ಳುತ್ತಿರುತ್ತಾರೆ. ಇದಕ್ಕೆ ಪುರುಷರೇನೂ ಹೊರತಲ್ಲ. ಏಷ್ಟೆಂದರೂ ಮನುಷ್ಯರಲ್ಲವೆ? ಆದರಲ್ಲೂ ವಿವಾಹಿತ ಮಹಿಳೆಯರು ಮನೆಯಾಯ್ತು ಉದ್ಯೋಗವಾಯ್ತು ಎಂಬ ನಿಲುವಿನವರು. ಅಂತಹವರು ಸಮಾಜಕ್ಕೆ ಅಮೂಲ್ಯವಾದ ಕೊಡಗೆ ನೀಡಲು ಸಾಧ್ಯ ಎಂಬುದನ್ನು ಸಾಬೀತು ಪಡಿಸಿದ್ದಾರೆ. ಈ ಸಾಲಿಗೆ ಸೇರಿದವರಲ್ಲಿ ಅನಿತಾ ಒಬ್ಬಾಕೆ.

ಬಡ ಕುಟುಂಬಕ್ಕೆ ಸೇರಿದ ಅನಿತಾ ಕಾಲೇಜು ಮೆಟ್ಟಿಲು ಹತ್ತುತ್ತಿದ್ದಂತೆ ವಿವಾಹದ ಮಾತುಕತೆ ನಡೆಯತೊಡಗಿದವು. ಹೆಣ್ಣು ಮಕ್ಕಳಿಗೆ ಕಲಿಸ ಬೇಕೆಂಬ ಆಸೆ ಇದ್ದರೂ, ಮದುವೆಯಾಗದೆ ಉಳಿದಲ್ಲಿ ಮತ್ತೊಂದು ರೀತಿಯ ಸಮಸ್ಯೆಯನ್ನೆದುರಿಸಲು ತಂದೆ ತಾಯಿಗಳು ಶಕ್ತರಲ್ಲ. ಹಾಗಾಗಿ ಒಡ ಹೆಣ್ಣು ಮಕ್ಕಳನ್ನು ದಾಟಿಸುವುದೇ ಕಷ್ಟ ಎಂಬುದರ ಬಗ್ಗೆ ತೀವ್ರ ಲಕ್ಷ ನೀಡಿದರು. ನೋಡಲು ಬಂದ ವರ ಒಪ್ಪಿದುದೇ ತಡ ತನ್ನ ಆಸೆ ಆಕಾಂಕ್ಷೆಗಳನ್ನು ಬದಿಗೊತ್ತಿ ಗೃಹಿಣಿಯಾಗಲು ಸಮ್ಮತಿಸಬೇಕಾಯಿತು ಅನಿತಾ. ಅತ್ತೆ ಮನೆಗೆ ಕಾಲಿಡುತ್ತಿದ್ದಂತೆ ಪತಿ ನೆಂಟರು ಇಷ್ಟರನ್ನು ಹಚ್ಚಿಕೊಂಡಿರುವುದು ಅನಿತಾಗೆ ತಿಳಿಯಿತು. ಅವರನ್ನು ಉಪಚರಿಸುವುದರಲ್ಲೇ ತನ್ನ ಕಾಲವನ್ನು ವ್ಯಯಿಸಬೇಕಲ್ಲಾ ಎಂದು ಮನಸ್ಸಿನ ಮೂಲೆಯಲ್ಲಿ ಆಕೆಗೆ ವೇದನೆಯಾಗುತ್ತಿತ್ತು.

ಅನಿತಾಳ ಪತಿ ಶಿಕ್ಷಣ ಇಲಾಖೆಯಲ್ಲಿದ್ದಾರೆ. ಅಂದಮೇಲೆ ಸ್ತ್ರೀ ಶಿಕ್ಷಣದ ಬಗ್ಗೆ ಅವರ ಅಭಿಪ್ರಾಯ ಹೇಗಿದ್ದಿರಬಹುದು ಎಂಬ ಕುತೂಹಲವುಂಟಾಗುತ್ತದಲ್ಲವೆ? ಅದರ ಬಗ್ಗೆ ವಿಚಾರಿಸಿದಾಗ ಅನಿತಾ ಒಮ್ಮೆ ಹೀಗೆಂದಿದ್ದರು. "ನೀನು ಓದನ್ನು ಮುಂದುವರಿಸಲು ನನ್ನದೇನೂ ಅಭ್ಯಂತರವಿಲ್ಲ. ನೆಂಟರು ಇಷ್ಟರು ಬರುವಾಗ ಪುಸ್ತಕ ಹಿಡಿದುಕೊಂಡಿರಬೇಡ, ನೋಡಿದವರು ಇವನು ಹೆಂಡತಿಯ ದಾಸ ಎನ್ನುವಂತೆ ಮಾಡಬೇಡ ಸಮಯ ಸಿಕ್ಕಿದಾಗ ಓದಿಕೊಳ್ಳಬೇಕು" ಎಂದು ಹಿತವಾಗಿ ಹೇಳಿದ್ರಂತೆ. ಇದನ್ನು ಅಪಾರ್ಥ ಮಾಡಿಕೊಳ್ಳದೆ ಎಂದು ಸಣ್ಣ ಮಕ್ಕಳನ್ನು ಕಟ್ಟಿಕೊಂಡು, ಬರವ ಹೋಗುವವರನ್ನು ಸುಧಾರಿಸಿಕೊಂಡು ಆಕೆ ಬಿ. ಎ. ಎಂ. ಎ. ಮುಗಿಸಿದರು. ನೌಕರಿಯನ್ನು ಮಾಡತೊಡಗಿದರು. ಜೊತೆ ಸಂಶೋಧನಾ ಕಾರ್ಯದಲ್ಲೂ ನಿರತಳಾಗಿ ಇತ್ತೀಚೆಗೆ ಪ್ರತಿಷ್ಟಿತ ವಿಶ್ವವಿದ್ಯಾನಿಲಯವೊಂದಕ್ಕೆ ಸಂಶೋಧನಾ ಪ್ರಬಂಧವನ್ನು ಮಂಡಿಸಿದ್ದಾರೆ. ಪಿ. ಹೆಚ್. ಡಿ. ಪದವಿಗೆ, 'ಅದೂ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ. ಈಗ ನೀವೇ ಊಹಿಸಿ ಆಕೆ ಎಷ್ಟರಮಟ್ಟಿಗೆ ಶ್ರಮಪಟ್ಟಿರಬಹುದೆಂದು ಗೃಹಿಣಿಯಾದಕ್ಷಣ ತನ್ನ ಧ್ಯೇಯಕ್ಕೆ ವಿದಾಯ ಹೇಳಬೇಕಾಗಿಲ್ಲ. ತಾನು ಅಬಲೆ ಎಂದು ಭಾವಿಸಿಕೊಳ್ಳುವ ಅಗತ್ಯವಿಲ್ಲ. ಮನುಷ್ಯನ ಸ್ವಭಾವ ತಿದ್ದಲಿಕ್ಕೆ ಸಾಧ್ಯವಿಲ್ಲ. ಸ್ವಭಾವಕ್ಕೆ ತಕ್ಕಂತ ವ್ಯಕ್ತಿತ್ವ ರೂಪಿತಗೊಳ್ಳುತ್ತದೆ. ಸೌಮ್ಯ ಅನಿತಾ ಸೌಮ್ಯವಾಗಿದ್ದೇ ತಮ್ಮ ಆಶೋತ್ತರಗಳನ್ನು ಈಡೇರಿಸಿಕೊಂಡಿದ್ದಾರೆ.

ಗಂಡ ಮಕ್ಕಳನ್ನು ಬಿಟ್ಟು ಬೇರೇನನ್ನೂ ಯೋಚಿಸಲಿಕ್ಕೆ ಸಾಧ್ಯವಿಲ್ಲ ಎಂಬ ಭಾವನೆ ಮಹಿಳೆಯರಲ್ಲಿ ದೂರವಾಗಬೇಕು. ಪುರುಷರ ಸಹಕಾರವಿಲ್ಲದೆ ತಾವೇನನ್ನು ಸಾಧಿಸಲಾರೆವು ಎಂಬ ಧೋರಣೆ ಸರಿಯಲ್ಲ. (ಸಹಕಾರವಿದ್ದಾಗೂ ಆಸಕ್ತಿ ಇಲ್ಲದಿದ್ದರೆ ಏನು ಪ್ರಯೋಜನ?) ಪ್ರತಿಯೊಂದು ಅನಿಷ್ಟಕ್ಕೂ ಮತ್ತೊಬ್ಬರನ್ನು ಕೈಮಾಡಿ ತೋರಿಸುವುದು ಯುಕ್ತವಲ್ಲ. ಯಾರೇ ಆಗಲಿ ಏನನ್ನಾದರೂ ಸಾಧಿಸಬೇಕೆಂಬ ಹಂಬಲ ತಮ್ಮಲ್ಲಿದೆಯೇ ಎಂಬುದನ್ನು ಕುರಿತು ಸ್ವವಿಮರ್ಶೆ ಮಾಡಿಕೊಳ್ಳುವುದು ಒಳಿತು. ಮನಸ್ಸಿನ ಸಹಕಾರ ಮುಖ್ಯ. ಅದೇ ವ್ಯಕ್ತಿಯ ಜೀವನದಲ್ಲಿ ಪ್ರಧಾನ ಪಾತ್ರವಹಿಸುತ್ತದೆ. ಸಾಧಕರಿಗೆ "ಮನಸೊಂದೇ ಮಾರ್ಗ" ಮನಸ್ಸನ್ನು ಗುರಿಯತ್ತ ಕೇಂದ್ರೀಕರಿಸಿದಾಗ ಉಳಿದುದೆಲ್ಲವೂ ಗೌಣ. ಇದನ್ನ ಅಲ್ಲಗಳೆಯಲು ಕೈಲಾಗದವರು ಯತ್ನಿಸುತ್ತಿರುವರಷ್ಟೆ.

# ಬ್ರಾಂಟಿ ಸೋದರಿಯರು

ಚಾರ್ಲೆಟ್, ಎಮಿಲಿ ಮತ್ತು ಆ್ಯನ್ ಎಂಬ ಕಾದಂಬರಿಕಾರ್ತಿಯರೇ ಬ್ರಾಂಟಿ ಸೋದರಿಯರು. ಈ ಮೂವರು ಸೋದರಿಯರು ಕಾವ್ಯ ರಚನೆಯಲ್ಲಿ ಯಶಸ್ವಿಯಾಗದೆ ಕಾದಂಬರಿ ಕ್ಷೇತ್ರವನ್ನು ಪ್ರವೇಶಿಸಿ ಬ್ರಾಂಟಿ ಸೋದರಿಯರೆಂದು ಪ್ರಖ್ಯಾತರಾದರು. ಇವರು ತಮ್ಮ ಹೆಸರನ್ನು ಬಹಿರಂಗ ಪಡಿಸಲು ಇಷ್ಟವಿಲ್ಲದೆ, ತಮ್ಮ ನಿಜ ಹೆಸರಿನ ಮೊದಲ ಅಕ್ಷರದಿಂದ ಆರಂಭವಾಗುವ ಬೇರೆ ಹೆಸರುಗಳನ್ನಿಟ್ಟುಕೊಂಡು ಪುಸ್ತಕಗಳನ್ನು ಪ್ರಕಟಿಸಿದರು.

ಬ್ರಾಂಟಿ ಸೋದರಿಯರ ತಂದೆ ಪ್ಯಾಟ್ರಿಕ್- ಧರ್ಮಬೋಧಕ. ಇಂಗ್ಲೆಂಡಿನ ಯಾರ್ಕ್‌ಶೈರ್ ಬಳಿಯ ಒಂದು ಸಣ್ಣ ಹಳ್ಳಿ ಈ ಸೋದರಿಯರ ಜನ್ಮಸ್ಥಳ. ಈ ಮೂವರೂ ತಮಗೆ ತಾವೇ ಓದಿಕೊಳ್ಳುವುದು, ಚಿತ್ರ ಬರೆಯುವುದು, ಒಬ್ಬರಿಗೊಬ್ಬರು ಕಥೆಗಳನ್ನು ಹೇಳಿಕೊಳ್ಳುವುದರಲ್ಲೇ ತುಂಬ ಸಮಯ ಕಳೆಯುತ್ತಿದ್ದರು.

ಇಂಗ್ಲಿಷ್ ಸಾಹಿತ್ಯಕ್ಕೆ ಈ ಸೋದರಿಯರು ಇತ್ತಿರುವ ಕಾಣಿಕೆ ಅಮೂಲ್ಯ. ಚಾರ್ಲೆಟಳ ಮೊದಲ ಕಾದಂಬರಿ "ಪ್ರಾಧ್ಯಾಪಕ" ೧೮೪೭ ರಲ್ಲಿ ಪ್ರಕಟವಾದ "ಜೇನ್ ಐರ್" ಎಂಬ ಈಕೆಯ ಇನ್ನೊಂದು ಕಾದಂಬರಿ ಬಹು ಬೇಗ ವಾಚಕರ ಮೆಚ್ಚುಗೆ ಗಳಿಸಿತು. ಮುಂದೆ ಕೈಗಾರಿಕಾ ಕ್ರಾಂತಿಯ ಹಿನ್ನಲೆಯುಳ್ಳ "ಶರ್ಲಿ" ಯೂ, "ಪ್ರಾಧ್ಯಾಪಕ" ಕಾದಂಬರಿಯ ಪುನರಚನೆಯಾದ "ವಿಲೆಟ್" ಎಂಬ ಕಾದಂಬರಿಗಳನ್ನು ಬರೆದಳು. ತಾನು ಮೊದಲು ಓದಿದ ಶಾಲೆಯಲ್ಲಿನ ಕಟು ಅನುಭವಗಳನ್ನು, ಮಕ್ಕಳ ರಕ್ಷಕಿಯಾಗಿ ಕೆಲಸ ಮಾಡುತ್ತಿದ್ದಾಗಿನ ಅನುಭವಗಳನ್ನು "ಜೇನ್ ಐರ್" ಕಾದಂಬರಿಯಲ್ಲಿ ಬರೆದಿದ್ದಾಳೆ. ಅವಳ ಜೀವನದ ಅನುಭವಗಳನ್ನು ಭಾವಪೂರ್ಣವಾಗಿ ಕಾದಂಗಳಲ್ಲಿ ವ್ಯಕ್ತ ಪಡಿಸಿದ್ದಾಳೆ.

ಎಮಿಲಿ ಬರೆದಿದ್ದು ಒಂದೇ ಕಾದಂಬರಿ "ವುದರಿಂಗ್ ಹೈಟ್ಸ್" ೧೮೪೭ ರಲ್ಲಿ ಪ್ರಕಟವಾದ ಈ ಕಾದಂಬರಿಯು ಆಂಗ್ಲ ಸಾಹಿತ್ಯದ ಮೇರು ಕೃತಿಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ಅವಳ ಮರಣಾನಂತರ ಪ್ರಖ್ಯಾತವಾದ ಈ ಕಾದಂಬರಿ ಒಂದು ಅದ್ಭುತ, ಅಲೌಕಿಕ ಸ್ವಪ್ನದಂತಿದೆ.

ಆ್ಯನ್ ಎರಡು ಕಾದಂಬರಿಗಳನ್ನು ಬರೆದಳಾದರೂ ಅಕ್ಕಂದಿರಷ್ಟು ಪ್ರಸಿದ್ಧಳಾಗಲಿಲ್ಲ. "ಆ್ಯಗ್ನೆಸ್ ಗ್ರೇ" ದಿ ಟೆನೆಂಟ್ ಆಫ್ ವೈಲ್ಡ್ ಫೆ ಹಾಲ್ ಈಕೆ ಬರೆದ ಕಾದಂಬರಿಗಳು. ಏಕಾಕಿಗಳಾದ ಯುವತಿಯರ ಬವಣೆಯ ಚಿತ್ರಣವನ್ನು ಈಕೆಯ ಕಾದಂಬರಿಗಳಲ್ಲಿ ಕಾಣಬಹುದು.

ಈ ಸೋದರಿಯರಿಗೆ ದೊರೆತ ಕೀರ್ತಿ ಅವರ ಜೀವನದ ರೀತಿಯ ಮೇಲೆ ಯಾವುದೇ ಪರಿಣಾಮ ಬೀರಲಿಲ್ಲ. ಅವರು ಗುಪ್ತನಾಮಗಳನ್ನಿಟ್ಟುಕೊಂಡು ಬರೆಯುತ್ತಿದ್ದರಿಂದ ಜನತೆಗೆ ಅವರ ನಿಜವಾದ ಪರಿಚಯವೂ ಆಗಲಿಲ್ಲ.

ಕೃಪೆ: ಜ್ಞಾನ ಗಂಗೋತ್ರಿ.

## ಒಂಟಿತನ

ಇರುಳ ಕಾರ್ಗತ್ತಲಿನಲಿ
ಬೋರೆನ್ನುವ ಮಳೆ ಗಾಳಿಯಲ್ಲಿ
ಬೆಚ್ಚಗೆ ಕುಳಿತ ಹೆಣ್ಣಿಗೆ
ಕಳೆದ ದಿನಗಳ ನೆನಪು
ಕೈ ತುಂಬ ಸಂಬಳ
ಸಣ್ಣ ಮಾತಿಗೆ ನೊಂದು ಕರಗುವ ಗಂಡ
ಮನದಾಸೆಗೆ ಮುತ್ತಿಕ್ಕುವ ಮುದ್ದು ಮಗಳ
ನಡುವೆಯೇ
ಅದೇನೋ ಕಾಡುತ್ತದೆ.
ಮನಸ್ಸಿನ ಒಂಟಿತನ
ದೆವ್ವ ಹೊಕ್ಕ ಮನೆಯಂತೆ ಭಿಕೋ ಎನ್ನುತ್ತದೆ.
ಬೇಕೆನಿಸಿದ್ದು ಕೈಯಲ್ಲಿದ್ದರೂ
ಕಾಡುವ ಸಂಗತಿಗಳು ನೂರಾರು

ಬಿ. ಟಿ. ಎಸ್. ಬಸ್‌ಗಳಲ್ಲಿ ಮಹಿಳೆಯರಿಗೆ ಸೀಟುಗಳ ಮೀಸಲಾತಿಯನ್ನು ಪ್ರಕಟಿಸಿ ತಿಂಗಳುಗಳೇ ಕಳೆದಿವೆ. ಆದರೆ ಅದರ ಉಪಯೋಗ ಸ್ತ್ರೀಯರಿಗೆ ಎಳ್ಳಷ್ಟು ಆಗಿಲ್ಲವೆಂಬುದು ತೀರಾ ಸ್ಪಷ್ಟ. ಅದರಲ್ಲೂ ನಗರದ ಹೊರವಲಯದಿಂದ ಪ್ರಯಾಣಿಸುವ ಮಹಿಳೆಯರು ಬಹಳಷ್ಟು ಕಹಿ ಪ್ರಸಂಗಗಳನ್ನು ಎದುರಿಸಬೇಕಾಗಿದೆ. ಪುರುಷರು ರಾಜಾರೋಷವಾಗಿ ಮಹಿಳೆಯರ ಸ್ಥಳಗಳನ್ನು ಆಕ್ರಮಿಸಿಕೊಳ್ಳುವುದರ ಜೊತೆಗೆ ಸೀಟು ಕೇಳುವ ಮಹಿಳೆಯರನ್ನು ಹೀನಾಮಾನವಾಗಿ ಅವಮಾನಿಸಲಾಗುತ್ತದೆ. ಇದರಿಂದಾಗಿ ಮಹಿಳೆಯರು ಅನಿವಾರ್ಯವಾಗಿ ಮೂಗಿಗಳಾಗಿ ಬಿಡುತ್ತಾರೆ. ಇಂತಹ ಅನುಭವಗಳನ್ನು ಅವಮಾನಕರ ಪ್ರಸಂಗವೆಂದು ಭಾವಿಸದೇ ಮಾನಸಕ್ಕೆ ಬರೆದು ಕಳಿಸಿ. ಹೀಗೆ ಅನುಭವಗಳನ್ನು ಹಂಚಿಕೊಳ್ಳುವುದರ ಮೂಲಕ ಹೆಚ್ಚು ಮಹಿಳೆಯರು ಸಂಘಟಿತರಾಗಿ ದನಿ ಎತ್ತಬಹುದು. ಮಹಿಳೆಯರಿಗಾಗಿ ಸ್ಥಳ ಮೀಸಲಾತಿಯು ಯಶಸ್ವಿಯಾಗಬೇಕಾದರೆ ಕೈಗೊಳ್ಳಬೇಕಾದ ಕ್ರಮ, ಸಲಹೆ ಸೂಚನೆಗಳನ್ನು ಬರೆದು ತಿಳಿಸಿ.

ಸಂ. ಮಂ.

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ ಬೆಂಗಳೂರು—೫೬೦೦೬೭.

REGD No KRNA 271

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : " ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067